KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಫೆಬ್ರವರಿ ೧೫, ೨೦೦೭ (ಮಾಘ ೨೬, ಶಕ ವರ್ಷ ೧೯೨೮) | ಸಂಚಿಕೆ ೭ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ನೀರಾವರಿ ಇಲಾಖೆಯ ತಾಂತ್ರಿಕ ಹುದ್ದೆಗಳಾದ ಜಂಟಿ ಕಾರ್ಯದರ್ಶಿ (ಎಂಎಂಐ) ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳು, ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ-3 ಹಾಗೂ ವಿಶ್ವಬ್ಯಾಂಕ್ ಶಾಖೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ದಿನಾಂಕ: 1.9.82 ಸಂಖ್ಯೆ:ಡಿಪಿಎಆರ್ 470 ಎಸ್‌ಜಿಐ 82ರ ಸರ್ಕಾರಿ ಆದೇಶ.
2) ದಿನಾಂಕ: 24.2.98 ಸಂಖ್ಯೆ:ಸಿಆಸುಇ 33 ಸಸಿವಿ 96ರ ಸರ್ಕಾರಿ ಆದೇಶ.
3) ದಿನಾಂಕ: 23.4.2001 ಸಂಖ್ಯೆ:ಸಿಆಸುಇ 1 ಸಸಿವಿ 96ರ ಸರ್ಕಾರಿ ಆದೇಶ.
4) ದಿನಾಂಕ: 19.11.2001 ಸಂಖ್ಯೆ:ಸಿಆಸುಇ 40 ಸಸಿವಿ 2001ರ ಸರ್ಕಾರಿ ಆದೇಶ.
5) ದಿನಾಂಕ: 13.1.2006 ಸಂಖ್ಯೆ:ಸಿಆಸುಇ 89 ಸಸಿವಿ 2005ರ ಸರ್ಕಾರಿ ಆದೇಶ.
6) ಅ.ಟಿ. ಸಂಖ್ಯೆ: ಜಸಂಇ 127 ಎಂಎಂಕೆ 2006, ದಿ:22.12.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ನೀರಾವರಿ ಶಾಖೆ ಮತ್ತು ಸೇವೆಗಳು ಶಾಖೆಯಲ್ಲಿ ಅಸ್ತಿತ್ವದಲ್ಲಿರುವ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| I. | 1. ಸರ್ಕಾರದ ಉಪ ಕಾರ್ಯದರ್ಶಿ (ನೀರಾವರಿ) (ಹಿಂದಿನ ವಿಶೇಷ ಕರ್ತವ್ಯಾಧಿಕಾರಿ) | ಒಂದು |
| | 2. ಶೀಘ್ರಲಿಪಿಗಾರ | ಒಂದು |
| | 3. ಕಿರಿಯ ಸಹಾಯಕರ | ಒಂದು |
| | 4. ದಲಾಯತ್ | ಒಂದು |
| | **ಒಟ್ಟು** | **ನಾಲ್ಕು** |
| II. | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ-3** | |
| | 1. ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ-2) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕರು | ಎರಡು |
| | 4. ಸಹಾಯಕರು | ಒಂದು |
| | 5. ಶೀಘ್ರಲಿಪಿಗಾರ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ಬೆರಳಚ್ಚುಗಾರ | ಒಂದು |
| | 8. ದಲಾಯತ್ | ಒಂದು |
| | **ಒಟ್ಟು** | **ಒಂಬತ್ತು** |

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| III. | **ವಿಶ್ವ ಬ್ಯಾಂಕ್ ಶಾಖೆ** | |
| | 1. ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕ | ಒಂದು |
| | 4. ಸಹಾಯಕ | ಒಂದು |
| | 5. ಶೀಘ್ರಲಿಪಿಗಾರ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ಬೆರಳಚ್ಚುಗಾರ | ಒಂದು |
| | 8. ದಲಾಯತ್ | ಒಂದು |
| | **ಒಟ್ಟು** | **ಎಂಟು** |
| IV. | 1. ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-೩) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕ | ಒಂದು |
| | 4. ಶೀಘ್ರಲಿಪಿಗಾರ | ಒಂದು |
| | 5. ಸಹಾಯಕ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ದಲಾಯತ್ | ಒಂದು |
| | **ಒಟ್ಟು** | **ಏಳು** |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ನೀರಾವರಿ ಇಲಾಖೆಯ (ಸೇವೆಗಳು-೩) ಶಾಖೆಯ 07 ಹುದ್ದೆಗಳನ್ನು ದಿನಾಂಕ: 1.1.98ರ ಪೂರ್ವಾಹ್ನದಿಂದ 31.12.98ರ ಅಪರಾಹ್ನದವರೆಗೆ ಮತ್ತು ಒಂದು ವರ್ಷದ ಅವಧಿಗೆ ಮಾತ್ರ ಮುಂದುವರಿಸಿರುವುದರಿಂದ ಸದರಿ ಹುದ್ದೆಗಳನ್ನು ನಂತರ ಮುಂದುವರಿಸಿರುವುದಿಲ್ಲ.

ಕ್ರಮ ಸಂಖ್ಯೆ: (3)ರ ಸರ್ಕಾರದ ಆದೇಶದಲ್ಲಿ ಎಲ್ಲಾ ಹುದ್ದೆಗಳನ್ನು ದಿನಾಂಕ: 1.1.2001 ರಿಂದ ದಿನಾಂಕ: 31.12.2001 ರವರೆಗೆ ಮುಂದುವರೆಸಲಾಗಿದೆ ಹಾಗೂ ಜಂಟಿ ಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ ಹುದ್ದೆಯನ್ನು ದಿನಾಂಕ: 10.11.2000 ರಿಂದ ಜಾರಿಗೆ ಬರುವಂತೆ ಉಪ ಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ ಎಂದು ನಿಮ್ನೀಕರಿಸಲಾಗಿದೆ.

ಕ್ರಮ ಸಂಖ್ಯೆ (3)ರ ಸರ್ಕಾರದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ಅಧೀನ ಕಾರ್ಯದರ್ಶಿ, ತಾಂತ್ರಿಕ-2, ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ-3 ಹುದ್ದೆಯನ್ನು ದಿನಾಂಕ: 31.12.2001 ರವರೆಗೆ ರೂ.9580-14200ರ ವೇತನ ಶ್ರೇಣಿಯ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಮಧ್ಯಮ ಮತ್ತು ಬಾರಿ ನೀರಾವರಿ ಶಾಖೆ-3 ಎಂದು ತಾತ್ಕಾಲಿಕವಾಗಿ ಉನ್ನತೀಕರಿಸಲಾಗಿದೆ.

ಕ್ರಮ ಸಂಖ್ಯೆ (5)ರ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಹುದ್ದೆಗಳನ್ನು ಖಾಯಂಗೊಳಿಸಿ ಆದೇಶ ಹೊರಡಿಸಲು ಇಲಾಖೆಯ ಪ್ರಸ್ತಾವನೆ ಇದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 101 ಸಸಿವಿ 2006, ಬೆಂಗಳೂರು, ದಿನಾಂಕ: 18ನೇ ಜನವರಿ 2007**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 1.1.2007 ರಿಂದ ಒಂದು ವರ್ಷದವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| I. | 1. ಸರ್ಕಾರದ ಉಪ ಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ | ಒಂದು |
| | 2. ಶೀಘ್ರಲಿಪಿಗಾರ | ಒಂದು |
| | 3. ಕಿರಿಯ ಸಹಾಯಕರ | ಒಂದು |
| | 4. ದಲಾಯತ್ | ಒಂದು |
| | **ಒಟ್ಟು** | **ನಾಲ್ಕು** |
| II. | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ-3** | |
| | 1. ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕರು | ಎರಡು |
| | 4. ಸಹಾಯಕರು | ಒಂದು |
| | 5. ಶೀಘ್ರಲಿಪಿಗಾರ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ಬೆರಳಚ್ಚುಗಾರ | ಒಂದು |
| | 8. ದಲಾಯತ್ | ಒಂದು |
| | **ಒಟ್ಟು** | **ಒಂಬತ್ತು** |

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| III. | **ವಿಶ್ವ ಬ್ಯಾಂಕ್ ಶಾಖೆ** | |
| | 1. ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) | ಒಂದು |
| | 2. ಶಾಖಾಧಿಕಾರಿ | ಒಂದು |
| | 3. ಹಿರಿಯ ಸಹಾಯಕ | ಒಂದು |
| | 4. ಸಹಾಯಕ | ಒಂದು |
| | 5. ಶೀಘ್ರಲಿಪಿಗಾರ | ಒಂದು |
| | 6. ಕಿರಿಯ ಸಹಾಯಕ | ಒಂದು |
| | 7. ಬೆರಳಚ್ಚುಗಾರ | ಒಂದು |
| | 8. ದಲಾಯತ್ | ಒಂದು |
| | **ಒಟ್ಟು** | **ಎಂಟು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರ ಪ್ರಕಾರ ಆರ್ಥಿಕ ಇಲಾಖೆಯ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 182

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬಾಗಲಕೋಟೆ ಜಿಲ್ಲೆ, ಬಾದಾಮಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಲಾಗಿರುವ ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 70 ಬೆಮಪ್ರಾ 2001 ದಿ:12.12.2001.
2) ಸದಸ್ಯ ಕಾರ್ಯದರ್ಶಿಗಳು, ನಗರ ಯೋಜನಾ ಪ್ರಾಧಿಕಾರ, ಬಾದಾಮಿ ಇವರ ಪತ್ರ ಸಂ.ನಯೋಪ್ರಾಬಾ: ಮಹಾಯೋಜನೆ :50:2006-07:ದಿ:23.9.2006.
3) ನಗರ ಯೋಜನಾ ನಿರ್ದೇಶಕರ ಏಕ ಕಡತ ಸಂ.ನಯೋ(6):ಉನಿ1:ಬಾದಾಮಿ:ಮಯೋ:15/10:2006.

**ಪ್ರಸ್ತಾವನೆ:**

ಮೇಲೆ ಓದಲಾದ(1)ರ ಸರ್ಕಾರದ ಅಧಿಸೂಚನೆಯಲ್ಲಿ ಬಾಗಲಕೋಟೆ ಜಿಲ್ಲೆ ಬಾದಾಮಿ ಪಟ್ಟಣ ಮತ್ತು ಸುತ್ತಮುತ್ತಲಿನ ಗ್ರಾಮಗಳನ್ನು ಒಳಗೊಂಡಂತೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 4ಎ ಮತ್ತು 4ಸಿ ರಡಿ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಬಾದಾಮಿ ನಗರ ಯೋಜನಾ ಪ್ರಾಧಿಕಾರವು ಬಾದಾಮಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ (5) ಮತ್ತು (10)ರನ್ವಯ ಕ್ರಮ ಜರುಗಿಸಿ ಮಹಾ ಯೋಜನೆಯನ್ನು ರೂಪಿಸಿ, ನಕ್ಷೆ ಹಾಗೂ ವರದಿಗಳೊಂದಿಗೆ, ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ಬಾದಾಮಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಜನಸಂಖ್ಯೆಯು 2021ರಲ್ಲಿ 42,500 ರಷ್ಟು ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಬಾದಾಮಿ ಸ್ಥಳೀಯ ಯೋಜನಾ ಪ್ರದೇಶದ 1591 ಹೆಕ್ಟೇರ್ ಪ್ರದೇಶದಲ್ಲಿ 472 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾ ಯೋಜನೆಯನ್ನು ರೂಪಿಸಲಾಗಿದೆ. ಹಾಗೂ ಬಾದಾಮಿ ಪಟ್ಟಣದ ಜನಸಂಖ್ಯೆ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಶೀಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾ ಯೋಜನೆಯ ತಯಾರಿಕೆಯ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ (12)ರನ್ವಯ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಬೆಳವಣಿಗೆಗೆ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ ಭೂಮಿಯನ್ನು ಕಾಯ್ದಿರಿಸಿ, ನಗರೀಕರಣದ ಎಲ್ಲೆಯ 472 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 238.89 ಹೆ, (50.61%) ವಾಣಿಜ್ಯಕ್ಕಾಗಿ 39.73 ಹೆ. (8.42%) ಕೈಗಾರಿಕೆಗಾಗಿ 20.76 ಹೆ, (4.40%) ನಾಗರೀಕ ಸೌಲಭ್ಯಕ್ಕಾಗಿ 0.62 ಹೆ, 0.13%), ಸಾರ್ವಜನಿಕ: ಅರೆಸಾರ್ವಜನಿಕ ಉಪಯೋಗಕ್ಕೆ 32.90 ಹೆ, (6.97%), ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 107.02 ಹೆ, (22.67%) ಹಾಗೂ ಉದ್ಯಾನವನ:ಬಯಲು ಜಾಗೆಗಳಿಗೆ 32.08 ಹೆ, (6.80%) ಜಾಗೆಯನ್ನು ನಿಗದಿಪಡಿಸಿ ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಿ, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 13(1)ರನ್ವಯ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಈ ವಿಷಯವನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 439 ಬೆಮಪ್ರಾ 2006, ಬೆಂಗಳೂರು, ದಿನಾಂಕ: 17ನೇ ಜನವರಿ 2007**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಬಾದಾಮಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ. ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 183

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಪಾಂಡವಪುರ ಮಂಡ್ಯ ಜಿಲ್ಲೆ - ಇದರ ವಿಶೇಷಾಧಿಕಾರಿಗಳ ಅಧಿಕಾರದ ಅವಧಿಯನ್ನು ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1) ಆದೇಶ ಸಂಖ್ಯೆ ಸಇ 45 ಸಸಕಾ 2006 ದಿನಾಂಕ 31.3.2006.
2) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರುರವರ ಪತ್ರ ಸಂಖ್ಯೆ ಡಿಎಸ್‌ಕೆ/ಇಎಸ್‌ಟಿಎಸ್ 162/2004-05 ದಿನಾಂಕ: 4.9.2006.

**ಪ್ರಸ್ತಾವನೆ:**

ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಪಾಂಡವಪುರ ಮಂಡ್ಯ ಜಿಲ್ಲೆ ಇದರ ವಿಶೇಷಾಧಿಕಾರಿಗಳ ಅಧಿಕಾರದ ಅವಧಿಯನ್ನು ಮೇಲೆ ಓದಲಾದ ಆದೇಶ ಕ್ರಮ ಸಂಖ್ಯೆ (1)ರಲ್ಲಿ ದಿನಾಂಕ:21.3.2006ರವರೆಗೆ ವಿಸ್ತರಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಪ್ರಸ್ತಾವವನ್ನು ಸಲ್ಲಿಸಿ ಕಾರ್ಖಾನೆಯನ್ನು 7 ವರ್ಷಗಳ ಅವಧಿಗೆ ಮೆ ಕೊಠಾರಿ ಶುಗರ್ಸ್ ಮತ್ತು ಕೆಮಿಕಲ್ಸ್ ಲಿ., ಚೆನ್ನೈರವರಿಗೆ ಗುತ್ತಿಗೆಗೆ ನೀಡಿದ್ದು ಗುತ್ತಿಗೆದಾರರು ಕಾರ್ಖಾನೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡು ಕಾರ್ಯಚರಣೆ ನಡೆಸುತ್ತಿರುತ್ತಾರೆ. ಕಾರ್ಖಾನೆಯ ಕೋರ್ಟು ಕಛೇರಿ ವ್ಯವಹಾರಗಳು, ಬ್ಯಾಂಕು ಹಾಗೂ ಇತರೆ ಹಣಕಾಸು ಸಂಸ್ಥೆಗಳ ಸಾಲದ ವ್ಯವಹಾರಗಳು, ವಿದ್ಯಾ ಸಂಸ್ಥೆಯ ವ್ಯವಹಾರಗಳು ಹಾಗೂ ಸರ್ಕಾರದ ಮಟ್ಟದ ವ್ಯವಹಾರಗಳು ಇನ್ನೂ ಮುಂದುವರೆಯುತ್ತಿರುವುದರಿಂದ ದಿನಾಂಕ 22.3.2006 ರಿಂದ 3 ವರ್ಷಗಳವರೆಗೆ ವಿಶೇಷಾಧಿಕಾರಿಗಳ ಅವಧಿಯನ್ನು ವಿಸ್ತರಿಸಲು ಆದೇಶ ಕೋರಿರುತ್ತಾರೆ. ಕಾರ್ಖಾನೆಯನ್ನು 7 ವರ್ಷಗಳ ಅವಧಿಗೆ ಗುತ್ತಿಗೆ ನೀಡಿರುವುದರಿಂದ ಗುತ್ತಿಗೆ ಅವಧಿ ಮುಗಿಯುವವರೆಗೆ ವಿಶೇಷಾಧಿಕಾರಿಗಳ ಅಧಿಕಾರವಧಿಯನ್ನು ವಿಸ್ತರಿಸಲು ಸರ್ಕಾರ ತೀರ್ಮಾನಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 244 ಸಸಕಾ 2006, ಬೆಂಗಳೂರು, ದಿನಾಂಕ: 18ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಪಾಂಡವಪುರ, ಮಂಡ್ಯ ಜಿಲ್ಲೆ ಇದರ ವಿಶೇಷಾಧಿಕಾರಿಗಳ ಅಧಿಕಾರ ಅವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: 22.3.2006 ರಿಂದ ಅನ್ವಯಾಗುವಂತೆ ಕಾರ್ಖಾನೆಯ 7 ವರ್ಷ ಅವಧಿಗೆ ಅಂದರೆ ಗುತ್ತಿಗೆ ಅವಧಿ ಮುಕ್ತಾಯವಾಗುವವರೆಗೂ ವಿಶೇಷಾಧಿಕಾರಿಗಳ ಅಧಿಕಾರ ಅವಧಿಯನ್ನು ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್. 184

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

**ವಿಷಯ:** ವಾಸವಿ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಚಿಕ್ಕಮಗಳೂರು ರವರು ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ರೂ. 30,000-00ಗಳನ್ನು ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಲೆಕ್ಕಪರಿಶೋಧನಾ, ನಿರ್ದೇಶಕರ ಪತ್ರ ಸಂಖ್ಯೆ: ಎಡಿಎಫ್/16/2003-04 ದಿನಾಂಕ: 10.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ವಾಸವಿ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ., ಚಿಕ್ಕಮಗಳೂರು ಇದರ 2002-03ನೇ ಸಾಲಿನ ಲೆಕ್ಕಪರಿಶೋಧನಾ ಶುಲ್ಕ ರೂ. 1,27,598/-ಗಳನ್ನು ಪಾವತಿಸುವಂತೆ ಸಹಾಯಕ ನಿರ್ದೇಶಕರು, ಚಿಕ್ಕಮಗಳೂರು ಇವರ ಪತ್ರ ದಿನಾಂಕ: 3.11.2003ರ ಪತ್ರದಲ್ಲಿ ತಗಾದಿಸಲಾಗಿತ್ತದೆಂದೂ ಸಂಸ್ಥೆಯು ಈ ತಗಾದೆ ಪತ್ರವನ್ನು ಪ್ರಶ್ನಿಸಿ ಗೌರವಾನ್ವಿತ ಕರ್ನಾಟಕ ಉಚ್ಛ ನ್ಯಾಯಾಲಯ, ಬೆಂಗಳೂರು ಇಲ್ಲಿ ರಿಟ್ ಅರ್ಜಿ ಸಂ:4461/03 (ಸಿಎನ್‌ಆರ್‌ಇಎಸ್) ಪ್ರಕರಣವನ್ನು ದಾಖಲಿಸಿತ್ತೆಂದೂ ಸದರಿ ಪ್ರಕರಣದಲ್ಲಿ ನ್ಯಾಯಾಲಯವು ದಿನಾಂಕ: 12.11.2003ರ ಆದೇಶದಡಿ ರೂ. 30,000/-ಗಳ ಠೇವಣಿ ಮಾಡುವ ಷರತ್ತಿನೊಂದಿಗೆ ಸಹಾಯಕ ನಿರ್ದೇಶಕರ ಸದರಿ ತಗಾದೆ ನೋಟೀಸಿಗೆ 2 ವಾರಗಳ ತಾತ್ಕಾಲಿಕ ತಡೆಯಾಜ್ಞೆಯನ್ನು ನೀಡಿತ್ತೆಂದೂ ಅದರಂತೆ ಸಂಸ್ಥೆಯು ದಿನಾಂಕ:5.12.2003 ರಂದು ಇಲಾಖಾ ಲೆಕ್ಕಪರಿಶೋಧನಾ ಶುಲ್ಕದ ಲೆಕ್ಕ ಶೀರ್ಷಿಕೆಯಡಿ ರೂ.30,000/-ಗಳನ್ನು ಖಜಾನೆಗೆ ಭರಣ ಮಾಡಿರುತ್ತದೆಂದೂ ಸದರಿ ಸಂಘದ ರಿಟ್ ಅರ್ಜಿ ಮತ್ತು ರಿಟ್ ಅಪೀಲುಗಳನ್ನು ಗೌರವಾನ್ವಿತ ಉಚ್ಛನ್ಯಾಯಾಲಯವು ದಿನಾಂಕ: 13.9.2004 ಮತ್ತು 7.4.2004 ರಂದು ಸಂಘದ ವಿರುದ್ಧ ಮತ್ತು ಇಲಾಖಾ ಪರವಾಗಿ ಇತ್ಯರ್ಥವಾಗಿದ್ದರ ಪ್ರಯುಕ್ತ ಸದರಿ ಸಂಘದವರು ಲೆಕ್ಕ ಪರಿಶೋಧನಾ ಶುಲ್ಕವಾಗಿ 2002-03ನೇ ಸಾಲಿಗೆ 1,27,598/- ರೂಗಳನ್ನು ಮತ್ತು 2003-04ನೇ ಸಾಲಿಗೆ 1,18,608/-ಗಳನ್ನು ಒಟ್ಟು 2,46,206/-ರೂಪಾಯಿಗಳನ್ನು ಪಾವತಿಸಿರುತ್ತಾರೆಂದೂ ಸದರಿ ಸಂಘವು 2002-03ನೇ ಸಾಲಿನ ಲೆಕ್ಕಪರಿಶೋಧನಾ ಶುಲ್ಕದ ಬಾಬ್ತು ಖಜಾನೆಗೆ

ಭರಣ ಮಾಡುವಾಗ ಈ ಹಿಂದೆ ಠೇವಣಿಸಿರುವ ರೂ. 30,000/-ಗಳನ್ನು ವಜಾ ಮಾಡಿ ಉಳಿದ ಲೆಕ್ಕಪರಿಶೋಧನಾ ಶುಲ್ಕದ ಮೊತ್ತ ಅಂದರೆ (ರೂ. 1,27,598-30,000=97,598) ರೂ. 97,598/-ಗಳನ್ನು ಮಾತ್ರ ಖಜಾನೆಗೆ ಭರಣ ಮಾಡಬೇಕಾಗಿತ್ತೆಂದೂ ಆದರೆ ಸದರಿ ಸಂಘವು ಪೂರ್ಣ ಮೊತ್ತ ರೂ. 1,27,598/-ಗಳನ್ನು ಖಜಾನೆಗೆ ಭರಣ ಮಾಡಿರುತ್ತದೆಂದೂ ಪರಿಣಾಮವಾಗಿ ರೂ. 30,000/-ಗಳ ಲೆಕ್ಕಪರಿಶೋಧನಾ ಶುಲ್ಕವನ್ನು (ತಗಾದೆಗಿಂತ) ಹೆಚ್ಚಿಗೆ ಸರ್ಕಾರಕ್ಕೆ ಪಾತಿಸಿದಂತಾಗಿದೆ ಎಂದೂ ಈ ಸಂಘವು ದಿನಾಂಕ: 17.3.2005 ರಿಂದ ಜಾರಿಗೆ ಬರುವಂತೆ ಕರ್ನಾಟಕ ಸೌಹಾರ್ದ ಸಹಕಾರಿ ಕಾಯ್ದೆಯಡಿ ನೋಂದಣಿಯಾಗಿ ಪರಿವರ್ತನೆಗೊಂಡ ಪ್ರಯುಕ್ತ 2004-05ನೇ ಸಾಲಿನಿಂದ ಈ ಸಂಘದ ಲೆಕ್ಕಪರಿಶೋಧನೆಯು ಚಾರ್ಟರ್ಡ್ ಅಕೌಂಟೆಂಟ್‌ರವರಿಂದ ನಿರ್ವಹಿಸಲ್ಪಡುವುದರಿಂದ ಸದರಿ ಸಂಘವು ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕಪರಿಶೋಧನಾ ಶುಲ್ಕದ ಮೊತ್ತ ರೂ. 30,000/-ಗಳನ್ನು ಸಂಘಕ್ಕೆ ವಾಪಸ್ಸು ಮಾಡಬೇಕಾಗಿದೆ ಎಂದೂ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಕೋರಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 252 ಸಿಎಲ್‌ಎಮ್ 2006, ಬೆಂಗಳೂರು, ದಿನಾಂಕ: 12ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಾಸವಿ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ, ಚಿಕ್ಕಮಗಳೂರು ಇದು ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕಪರಿಶೋಧನಾ ಶುಲ್ಕ ರೂ. 30,000/-ಗಳನ್ನು (ಮೂವತ್ತು ಸಾವಿರಗಳು ಮಾತ್ರ) ಸದರಿ ಸಂಘಕ್ಕೆ ಮರುಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2006-07ನೇ ಸಾಲಿನಲ್ಲಿ ಒದಗಿಸಿರುವ ಆಯವ್ಯಯದ ಲೆಕ್ಕ ಶೀರ್ಷಿಕೆ 0425-00-900-0-00 ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 686 ವೆಚ್ಚ-2/2006 ದಿನಾಂಕ: 22.12.2006ರಲ್ಲಿ ನೀಡಿರುವ ಒಪ್ಪಿಗೆ ಹಾಗೂ ಸ.ಆ.ಸಂಖ್ಯೆ:ಎಫ್-1/ಟಿಎಫ್‌ಪಿ/2001 ದಿನಾಂಕ:2.2.2001 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಬ್ಬಾಚಾರಿ**

ಪಿ.ಆರ್. 185

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ತುಮಕೂರು ತಾಲ್ಲೂಕು ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಂಇ 37 ಇಎಫ್‌ಎಸ್ 1994, ದಿನಾಂಕ: 17.9.1996.
2) ಆಡಳಿತಾಧಿಕಾರಿ, ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ ಇವರ ವರದಿ ಸಂಖ್ಯೆ: ಸೆಂ.ಎ.ಜು.ಸೊ.31/ 1996-97 ದಿನಾಂಕ: 28.9.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ಈ ಸಂಸ್ಥೆಗೆ ಸಂಸ್ಥೆಯ ಹಿತದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲಾಗಿದ್ದು, ಆಡಳಿತಾಧಿಕಾರಿಯ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದೆ. ಓದಲಾದ (2)ರಲ್ಲಿ ಆಡಳಿತಾಧಿಕಾರಿಗಳು, ಸೆಂಟ್ರಲ್ ಎಜುಕೇಷನ್ ಸೊಸೈಟಿ ಇವರು ಪ್ರಸ್ತಾವನೆ ಸಲ್ಲಿಸಿ ಸಂಸ್ಥೆ ಸದಸ್ಯರ ಕುರಿತು ಪ್ರಕರಣವು ನ್ಯಾಯಾಲಯದಲ್ಲಿದ್ದು, ಇನ್ನೂ ಇತ್ಯರ್ಥವಾಗದೇ ಇರುವುದರಿಂದ ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಹಿತದೃಷ್ಟಿಯಿಂದ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಲು ಕೋರಿದ್ದಾರೆ. ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 51 ಮುನೋಸೋ 2006, ಬೆಂಗಳೂರು, ದಿನಾಂಕ: 12ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ-27-ಎ ಪ್ರಕಾರ ಸೆಂಟ್ರಲ್ ಎಜುಕೇಷನ್ ಸೊಸೈಟಿ, ಊರ್ಡಿಗೆರೆ, ಈ ಸಂಸ್ಥೆಗೆ ನೇಮಕ ಮಾಡಲಾಗಿದ್ದ ಆಡಳಿತಾಧಿಕಾರಿ ಅವಧಿಯನ್ನು ಸಂಸ್ಥೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 19.9.2006 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ, ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 186

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಅಗ್ನಿಕುಲ ತಿಗಳರ ಜನಾಂಗ (ರಿ), ಗುಂಚಿ ಚೌಕ, ತುಮಕೂರು ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಂಇ 56 ಮುನೋಸೊ 2004, ದಿನಾಂಕ: 26.7.2005.
2) ಆಡಳಿತಾಧಿಕಾರಿಗಳು, ಅಗ್ನಿಕುಲ ತಿಗಳರ ಜನಾಂಗ, ತುಮಕೂರು ಇವರ ಪತ್ರ ಸಂಖ್ಯೆ: ಚು.ವಿ.ವ.ಸಿ.ಆರ್.21/ 2005-06 ದಿನಾಂಕ: 10.11.2006.

**ಪ್ರಸ್ತಾವನೆ:**

ಅಗ್ನಿಕುಲ ತಿಗಳರ ಜನಾಂಗ (ರಿ) ಗುಂಚಿ ಚೌಕ, ತುಮಕೂರು ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರನ್ವಯ ದಿನಾಂಕ:6.7.1974 ರಂದು ನೋಂದಣಿ ಸಂಖ್ಯೆ:62/74-75 ರಲ್ಲಿ ನೋಂದಾಯಿಸಿದ್ದು ಸಂಘದಲ್ಲಿಯ ಅವ್ಯವಹಾರಗಳು ನಡೆಯುತ್ತಿದ್ದು ಸಂಘವನ್ನು ಸರಿದಾರಿಗೆ ತರುವ ದೃಷ್ಟಿಯಿಂದ ಮೇಲೆ ಓದಲಾದ-1 ರಲ್ಲಿ ತಹಶೀಲ್ದಾರ್, ತುಮಕೂರು ತಾಲ್ಲೂಕು ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ

ಮಾಡಲಾಗಿತ್ತು. ಓದಲಾದ-2 ರಲ್ಲಿ ಆಡಳಿತಾಧಿಕಾರಿಗಳು ಪ್ರಸ್ತಾವನೆ ಸಲ್ಲಿಸಿ ತಾವು ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಚುನಾವಣೆಯ ಕಾರ್ಯದ ಒತ್ತಡದಿಂದ ಸದರಿ ಸಂಘದ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲ, ಆದ್ದರಿಂದ ಅಗ್ನಿಕುಲ ತಿಗಳರ ಜನಾಂಗ ಈ ಸಂಸೆಯ ಚುನಾವಣೆ ನಡೆಸಲು ಆಳಿತಾಧಿಕಾರಿ ಅವಧಿಯನ್ನು 3 ತಿಂಗಳ ಅವಧಿಗೆ ವಿಸ್ತರಿಸಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 86 ಮುನೊಸೊ 2006, ಬೆಂಗಳೂರು, ದಿನಾಂಕ: 16ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅಗ್ನಿಕುಲ ತಿಗಳರ ಜನಾಂಗ (ರಿ), ಗುಂಚಿ ಚೌಕ, ತುಮಕೂರು, ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ(1)(ಸಿ)ರ ಪ್ರಕಾರ ನೇಮಕವಾದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 26.1.2006 ರಿಂದ 25.7.2006 ಹಾಗೂ ದಿನಾಂಕ: 26.7.2006 ರಿಂದ 25.1.2007 ರವರೆಗೆ ವಿಸ್ತರಿಸಿ ಆದೇಶಿಸಿದೆ. ಈ ವಿಸ್ತರಿಸಿದ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆ ನಡೆಸಿ, ನೂತನ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ. ಆಡಳಿತಾಧಿಕಾರಿಯವರು ವಿಸ್ತರಣಾ ಅವಧಿಯೊಳಗೆ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 187

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀ ಜಿ.ವಿ. ವೆಂಕಟೇಶಪ್ಪ, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಶಿಡ್ಲಘಟ್ಟ, ಕೋಲಾರ ಜಿಲ್ಲೆ, ಹಾಲಿ ನಿವೃತ್ತ ತಹಶೀಲ್ದಾರ್, ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವ ಬಗ್ಗೆ.

**ಓದಲಾಗಿದೆ:**

1) ಆಗಿನ ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ ಇವರ ಪತ್ರ ಸಂ:ಸಿಸಿಎ ಸಿಆರ್. 38/2001-02, ದಿನಾಂಕ: 26.10.2002.
2) ಶ್ರೀ ಜಿ.ವಿ. ವೆಂಕಟೇಶಪ್ಪ, ನಿವೃತ್ತ ತಹಶೀಲ್ದಾರ್ ಇರಿಗೆ ನೀಡಿರುವ ಕಾರಣ ಕೇಳುವ ನೋಟೀಸು, ದಿನಾಂಕ: 9.10.2003.
3) ಶ್ರೀ ಜಿ.ವಿ. ವೆಂಕಟೇಶಪ್ಪ, ಇವರ ಲಿಖಿತ ಸಮಜಾಯಿಷಿ ದಿನಾಂಕ: 3.11.2003.
4) ಸರ್ಕಾರದ ಆದೇಶ ಸಂ: ಆರ್.ಡಿ. 31 ಎಡಿಇ 2003, ದಿ: 7.6.2004.
5) ಸರ್ಕಾರದ ತಿದ್ದುಪಡಿ ಆದೇಶದ ಸಂ: ಆರ್.ಡಿ. 31 ಎಡಿಇ 2003, ದಿ:26.10.2004.
6) ವಿಚಾರಣಾಧಿಕಾರಿಗಳ ವರದಿ ದಿ: 9.7.2005.
7) ಎರಡನೇ ಕಾರಣ ಕೇಳುವ ನೋಟೀಸು ದಿ:28.11.2005.
8) ಶ್ರೀ ಜಿ.ವಿ. ವೆಂಕಟೇಶಪ್ಪ, ಇರ ಲಿಖಿತ ಸಮಜಾಯಿಷಿ, ದಿ: 25.1.2006.
9) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಸಹಮತಿ ದಿ:6.12.2006.

**ಪ್ರಸ್ತಾವನೆ:**

ಶ್ರೀ ಜಿ.ವಿ. ವೆಂಕಟೇಶಪ್ಪ, ಇವರು ಈ ಹಿಂದೆ ಕೋಲಾರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕು ತಹಶೀಲ್ದಾರ್ ರವರ ಕಛೇರಿಯಲ್ಲಿ ತಾಲ್ಲೂಕು ಶಿರಸ್ತೇದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ: 7.4.1995 ರಿಂದ 31.7.1995ರ ಅವಧಿಯಲ್ಲಿ ಪ್ರಭಾರಿ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ:31.7.1995 ರಂದು ಕಸಬಾ ಹೋಬಳಿ ಗೊರಮಡಗು ಗ್ರಾಮದ ಸ.ನಂ. 1ರಲ್ಲಿ (1) ಶ್ರೀ ಹೆಚ್.ಎನ್. ಕೃಷ್ಣಪ್ಪ ಬಿನ್ ನಾರಾಯಣಪ್ಪ, ರವರಿಗೆ 3 ಎಕರೆ (2) ಶ್ರೀ ರಾಮಾಂಜನಪ್ಪ ಬಿನ್ ಚಿಕ್ಕಲಕ್ಕೆಗೌಡ ಇವರಿಗೆ 3 ಎಕರೆ ಮತ್ತು (3) ಲಕ್ಷ್ಮೀದೇವಮ್ಮ ಬಿನ್ ಅವಲಪ್ಪ ಇವರಿಗೆ 2 ಎಕರೆ 0.15 ಗುಂಟೆ ಜಮೀನುಗಳನ್ನು ಅನಧಿಕೃತ ಸಾಗುವಳಿ, ಸಕ್ರಮೀಕರಣ ಯೋಜನೆಯಡಿ ಅಕ್ರಮವಾಗಿ ಸಾಗುವಳಿ ಚೀಟಿಗಳನ್ನು ನೀಡಿ ಕರ್ತವ್ಯ ಚ್ಯುತಿ ಎಸಗಿದ ಕಾರಣಕ್ಕಾಗಿ ಮೇಲೆ ಓದಲಾದ ಕ್ರ.ಸಂ.1ರ ಪತ್ರದಲ್ಲಿ ಅನುಬಂಧ 1 ರಿಂದ 4ರ ವರೆಗೆ ಆರೋಪ ಪಟ್ಟಿಗಳನ್ನು ಕಳುಹಿಸಿಕೊಡುತ್ತಾ ಸರ್ಕಾರದ ಮಟ್ಟದಲ್ಲಿ ಶಿಸ್ತಿನ ಕ್ರಮ ಕೈಗೊಳ್ಳಲು ಕೋರಲಾಗಿತ್ತು. ಸದರಿ ಆರೋಪ ಪಟ್ಟಿಗಲನ್ನು ಕಾರಣ ಕೇಲುವ ನೋಟೀಸಿನೊಂದಿಗೆ ಮೇಲೆ ಓದಲಾದ ಕ್ರ.ಸಂ. 2ರಲ್ಲಿ ಜಾರಿ ಮಾಡಿ, ಅವರಿಂದ ಲಿಖಿತ ಸಮಾಜಿಯಿಷಿ ನೀಡಲು ಸೂಚಿಸಲಾಗಿತ್ತು. ಅದರಂತೆ, ಸದರಿ ಅಧಿಕಾರಿಗಳು ಮೇಲೆ ಓದಲಾದ ಕ್ರ.ಸಂ.3 ರಲ್ಲಿ ತಮ್ಮ ಲಿಖಿತ ಸಮಜಾಯಿಶಿ ಸಲ್ಲಿಸಿ, ತಾವು ನೀಡಿರುವ ಉತ್ತರಗಳನ್ನು ಪರಿಗಣಿಸಲು ಅಥವಾ ಇಲಾಖಾ ವಿಚಾರಣೆಗೆ ಆದೇಶ ಮಾಡಬಹುದೆಂದು ಪ್ರಾರ್ಥಿಸಿದ್ದರು. ಈ ವಿಷಯದಲ್ಲಿ ಸತ್ಯಾಸತ್ಯತೆಯನ್ನು ತಿಳಿಯಲು, ಸರ್ಕಾರವು ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ಭಾವಿಸಿ ಮೇಲೆ ಓದಲಾದ ಕ್ರ.ಸಂ.4 ಆದೇಶದಲ್ಲಿ ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು. ಅದರಂತೆ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ವಿಚಾರಣೆಯನ್ನು ಜರುಗಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಮೇಲೆ ಓಲಾದ ಕ್ರ.ಸಂ. (6)ರಲ್ಲಿ ಸಲ್ಲಿಸಿರುತ್ತಾರೆ. ಈ ವಿಚಾರಣಾ ವರದಿಯೊಂದಿಗೆ ಶ್ರೀ ಜಿ.ವಿ. ವೆಂಕಟೇಶಪ್ಪ, ನಿವೃತ್ತ ತಹಶೀಲ್ದಾರ್ ಇವರಿಗೆ 2ನೇ ಕಾರಣ ಕೇಳುವ ನೋಟೀನ್ನು ಮೇಲೆ ಓದಲಾದ ಕ್ರ.ಸಂ. 7ರಲ್ಲಿ ಜಾರಿ ಮಾಡಲಾಗಿತ್ತು. ಈ ನೋಟೀಸಿಗೆ ಸದರಿ ನಿವೃತ್ತ ಅಧಿಕಾರಿಗಳು ತಮ್ಮ ಲಿಖಿತ ಸಮಜಾಯಿಷಿಯನ್ನು ಮೇಲೆ ಓಲಾದ ಕ್ರ.ಸಂ. 8 ರಲ್ಲಿ ನೀಡಿರುತ್ತಾರೆ. ಲಿಖಿತ ಸಮಜಾಯಿಷಿಯನ್ನು ಪರಿಶೀಲಿಸಿದ ಸರಕಾರವು ವಿಚಾರಣಾ ವರದಿಯಲ್ಲಿ ಆರೋಪಗಳು ಸಾಬೀತಾಗಿರುವುದರಿಂದ, ಈ ನಿವೃತ್ತ ಅಧಿಕಾರಿಗಳ ವಿರುದ್ಧ ದಂಡನೆ ವಿಧಿಸಲು ತೀರ್ಮಾನಿಸಿರುವುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂ: ಆರ್.ಡಿ. 31 ಎಡಿಇ 2003, ಬೆಂಗಳೂರು, ದಿನಾಂಕ: 9ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಜಿ.ವಿ. ವೆಂಕಟೇಶಪ್ಪ, ಇವರು ಕೋಲಾರ ಜಿಲ್ಲೆ, ಶಿಡ್ಲಘಟ್ಟ ತಾಲ್ಲೂಕಿನಲ್ಲಿ ಪ್ರಭಾರ ತಹಸೀಲ್ದಾರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಇವರ ವಿರುದ್ಧ ಮಾಡಿರುವ ಆರೋಪಕ್ಕೆ ಸಂಬಂಧಿಸಿದಂತೆ, ವಿಚಾರಣೆ ವರದಿಯಲ್ಲಿ ಆರೋಪಗಳು ಸಾಬೀತಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ

ಸರ್ಕಾರವು ಶ್ರೀ ಜಿ.ವಿ. ವೆಂಕಟೇಶಪ್ಪ, ಹಿಂದಿನ ಶಿರಸ್ತೇದಾರ್, ತಾಲ್ಲೂಕು ಕಛೇರಿ, ಶಿಡ್ಲಘಟ್ಟ, ಕೋಲಾರ ಜಿಲ್ಲೆ ಹಾಲಿ ನಿವೃತ್ತ ತಹಶೀಲ್ದಾರರು ಇವರ ನಿವೃತ್ತ ವೇತನದಲ್ಲಿ ಮಾಹೇಯಾನ ರೂ. 200/- ರಂತೆ ಶಾಶ್ವತವಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಕಡಿತಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗವು ತನ್ನ ದಿನಾಂಕ: 6.12.2006ರ ಪತ್ರ ಸಂ: PSC 70 CNS 2006, ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 188

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ತಹಶೀಲ್ದಾರ್, ಹಾನಗಲ್, ಇವರ ಕಾರ್ಯಾಲಯದಲ್ಲಿ ತಸ್ತೀಕ್ ಹಣ ದುರುಪಯೋಗವಾಗಿರುವ ಬಗ್ಗೆ ಶ್ರೀ ಸಿ. ಪ್ರಕಾಶನ್, ಅಂದಿನ ತಹಶೀಲ್ದಾರ್, ಹಾನಗಲ್, ಮತ್ತು ಶ್ರೀ ಎಸ್.ವಿ. ಕರಿಲಿಂಗಣ್ಣನವರ್, ಶಿರಸ್ತೇದಾರ್ ಇವರನ್ನೂ ಅಮಾನತ್ತು ಮಾಡಲಾಗಿದ್ದನ್ನು ತೆರವುಗೊಳಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 54 ಎಡಿಇ 2006, ದಿನಾಂಕ: 17.8.2006.
2) ಜಿಲ್ಲಾಧಿಕಾರಿಗಳು, ಹಾವೇರಿ ಇವರ ದಿನಾಂಕ: 28.10.2006ರ ಪತ್ರ.
3) ಕಾರಣ ಕೇಳುವ ನೋಟೀಸು ಸಂ: ಆರ್.ಡಿ. 54 ಎಡಿಇ 2006, ದಿನಾಂಕ:13.12.2006.
4) ಶ್ರೀ ಎಸ್.ವಿ. ಕರಿಲಿಂಗಣ್ಣನವರ್, ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹಾನಗಲ್ ಇವರ ಮನವಿ 18.8.2006 ಹಾಗೂ ಶ್ರೀ ಸಿ. ಪ್ರಕಾಶನ್, ಹಿಂದಿನ ತಹಶೀಲ್ದಾರ್, ಹಾನಗಲ್ ಇವರ ಮನವಿ ದಿನಾಂಕ:3.11.2006.

**ಪ್ರಸ್ತಾವನೆ:**

ಹಾನಗಲ್ ತಾಲ್ಲೂಕಿನ 162 ದೇವಸ್ಥಾನಗಳ ತಸ್ತೀಕ್ ಹಣ ದುರುಪಯೋಗವಾದ ಬಗ್ಗೆ, ಹಾವೇರಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯ ಮೇಲೆ, ಕ್ರ.ಸಂ. 1ರಲ್ಲಿ ಓದಲಾದ ದಿನಾಂಕ: 17.8.2006ರಲ್ಲಿ ಸರ್ಕಾರಿ ಆದೇಶದಲ್ಲಿ ಶ್ರೀ ಸಿ. ಪ್ರಕಾಶನ್, ಹಿಂದಿನ ತಹಶೀಲ್ದಾರ್, ಹಾನಗಲ್ ಮತ್ತು ಶ್ರೀ ಎಸ್.ವಿ. ಕರಿಲಿಂಗಣ್ಣನವರ್, ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹಾನಗಲ್ ಹಾಗೂ ಶ್ರೀ ಪಿ.ಕೆ. ರಿತ್ತಿಮಠ್, ದ್ವಿತೀಯ ದರ್ಜೆ ಸಹಾಯಕ, ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾನುಸಾರ 1957ರ ನಿಯಮ 10(1) (ಡಿ) ರಡಿಯಲ್ಲಿ ಸದರಿ ಆದೇಶದಲ್ಲಿ ತಿಳಿಸಿರುವ ಕಾರಣಗಳಿಗಾಗಿ ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಜಿಲ್ಲಾಧಿಕಾರಿಗಳು, ಹಾವೇರಿ ಇವರು ದಿನಾಂಕ: 4.9.2006ರ ಪತ್ರದಲ್ಲಿ ಶ್ರೀ ಪಿ.ಕೆ. ರಿತ್ತಿಮಠ್, ಹಿಂದಿನ ದ್ವಿ.ದ. ಸಹಾಯಕರು ಇವರು ದಿನಾಂಕ: 20.8.2006 ರಂದು ಮರಣಹೊಂದಿದ್ದರಿಂದ ಅಮಾನತ್ತು ಆದೇಶ ಜಾರಿಯಾಗಿರುವುದಿಲ್ಲ ಎಂದು ವರದಿ ಮಾಡಿರುತ್ತಾರೆ.

ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಪತ್ರದಲ್ಲಿ ಹಾವೇರಿ ಜಿಲ್ಲಾಧಿಕಾರಿಗಳು ಶ್ರೀ ಸಿ. ಪ್ರಕಾಶನ್, ಹಿಂದಿನ ತಹಶೀಲ್ದಾರ್, ಹಾನಗಲ್ (ಪ್ರಸ್ತುತ ಅಮಾನತ್ತಿನಲ್ಲಿರುವ) ಮತ್ತು ಶ್ರೀ ಎಸ್.ವಿ. ಕರಿಲಿಂಗಣ್ಣನವರ್, ಶಿರಸ್ತೇದಾರ್, ತಾಲ್ಲೂಕು ಕಚೇರಿ, ಹಾನಗಲ್ (ಪ್ರಸ್ತುತ ಅಮಾನತ್ತಿನಲ್ಲಿರುವ) ಇವರುಗಳ ವಿರುದ್ಧದ ದೋಷಾರೋಪಣಾ ಪಟ್ಟಿಗಳನ್ನು (ಅನುಬಂಧ 1 ರಿಂದ 4ರ ವರೆಗೆ) ಕಳುಹಿಸಿರುತ್ತಾರೆ. ಈ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಶ್ರೀ ಸಿ. ಪ್ರಕಾಶನ್, ಹಿಂದಿನ ತಹಶೀಲ್ದಾರ್, ಹಾನಗಲ್ (ಪ್ರಸ್ತುತ ಅಮಾನತ್ತಿನಲ್ಲಿರುವ) ಮತ್ತು ಶ್ರೀ ಎಸ್.ವಿ. ಕರಿಲಿಂಗಣ್ಣನವರ್, ಶಿರಸ್ತೇದಾರ್, ಹಾನಗಲ್ ತಾಲ್ಲೂಕು ಕಛೇರಿ (ಪ್ರಸ್ತುತ ಅಮಾನತ್ತಿನಲ್ಲಿರುವ) ಇವರುಗಳಿಗೆ ಮೇಲೆ ಕ್ರ. ಸಂ. 3 ರಲ್ಲಿ ಓದಲಾದ ನೋಟೀಸಿನೊಂದಿಗೆ ಹಾವೇರಿ ಜಿಲ್ಲಾಧಿಕಾರಿಗಳ ಮುಖಾಂತರ ಜಾರಿ ಮಾಡಲು ಕಳುಹಿಸಿದೆ.

ಮೇಲೆ ಓದಲಾದ ಕ್ರ.ಸಂ. 4 ರಲ್ಲಿನ ಮನವಿಗಳಲ್ಲಿ ಶ್ರೀ ಸಿ. ಪ್ರಕಾಶನ್, ತಹಶೀಲ್ದಾರ್ ಇವರು ಇಲಾಖಾ ವಿಚಾರಣೆ ಬಾಕಿಯಿಟ್ಟು, ತಮ್ಮನ್ನು ಅಮಾನತ್ತಿನಿಂದ ಮುಕ್ತ ಮಾಡಬೇಕೆಂದು ಹಾಗೂ ಶ್ರೀ ಎಸ್.ವಿ. ಕರಿಲಿಂಗಣ್ಣನವರ್, ಶಿರಸ್ತೇದಾರ್ ಇವರು ತಾವು ಯಾವುದೇ ತಪ್ಪು ಮಾಡಿಲ್ಲದಿರುವ ಕಾರಣ ತಮ್ಮನ್ನು ಆಪಾದನೆಯಿಂದ ಕೈಬಿಡಲು ವಿನಂತಿಸಿರುತ್ತಾರೆ. ಆದರೆ, ಈ ಪ್ರಕರಣದಲ್ಲಿ, ಸತ್ಯಾಸತ್ಯತೆ ತಿಳಿಯಲು ಇಲಾಖಾ ವಿಚಾರಣೆ ಹೂಡುವುದು ಅವಶ್ಯವಿದ್ದುದರಿಂದ, ಇಲಾಖಾ ವಿಚಾರಣೆ ಹೂಡಲು ಕ್ರಮ ಕೈಗೊಳ್ಳಲಾಗಿದೆ.

ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಇವರುಗಳನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸುವಂತೆ ಸರ್ಕಾರವು ನಿರ್ಧರಿಸಿದೆ. ಆದಕ್ಕಾಗಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂ.ಇ. 54 ಎಡಿಇ 2006, ಬೆಂಗಳೂರು, ದಿನಾಂಕ: 12ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಹಾನಗಲ್ ತಾಲ್ಲೂಕಿನ ತಹಶೀಲ್ದಾರರಾಗಿ ಈ ಹಿಂದೆ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಸಿ. ಪ್ರಕಾಶನ್, (ಅಮಾನತ್ತಿನಲ್ಲಿನ ಅವಧಿಯಲ್ಲಿ ಸಿದ್ದಾಪುರ ತಾಲ್ಲೂಕು ತಹಶೀಲ್ದಾರ್) ಮತ್ತು ಶ್ರೀ ಎಸ್.ವಿ. ಕರಿಲಿಂಗಣ್ಣನವರ್, ಶಿರಸ್ತೇದಾರ್, ತಾಲ್ಲೂಕು ಕಛೇರಿ, ಹಾನಗಲ್, ಇವರುಗಳನ್ನು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 10(5)(c) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಕೂಡಲೇ ಜಾರಿಗೆ ಬರುವಂತೆ ಅವರನ್ನು ಅಮಾನತ್ತಿನಿಂದ ಬಿಡುಗಡೆಗೊಳಿಸಿ, ಆದೇಶಿಸಿದೆ. ಶ್ರೀ ಸಿ. ಪ್ರಕಾಶನ್, ತಹಸೀಲ್ದಾರ್, ಇವರನ್ನು ಸಿದ್ದಾಪುರ ತಾಲ್ಲೂಕು ತಹಶೀಲ್ದಾರರಾಗಿ ಮರು ಸ್ಥಳ ನಿಯುಕ್ತಿಗೊಳಿಸಿದೆ ಹಾಗೂ ಶ್ರೀ ಎಸ್.ವಿ. ಕರಿಲಿಂಗಣ್ಣನವರ್, ಶಿರಸ್ತೇದಾರ್, ಇವರನ್ನು ಹಾನಗಲ್ ತಾಲ್ಲೂಕಿನ ಬೊಮ್ಮನಹಳ್ಳಿ ನಾಡಕೇರಿಯಲ್ಲಿ ಖಾಲಿ ಇರುವ ಉಪತಹಶೀಲ್ದಾರ್ ಹುದ್ದೆಗೆ ಈ ಕೂಡಲೇ ಜಾರಿಗೆ ಬರುವಂತೆ ತೈನಾತಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶ್ರೀಮತಿ ಚಂದ್ರಶೇಖರ್**

ಪಿ.ಆರ್. 189

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು-3)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಕೆ.ಆರ್. ನಗರ ತಾಲ್ಲೂಕು ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ:ರಶಾ: ಸ೩೦1:ಮೇಲ್ದರ್ಜೆ:2006-07, ದಿನಾಂಕ: 14.8.2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮೈಸೂರು ಜಿಲ್ಲೆ, ಕೆ.ಆರ್. ನಗರ ತಾಲ್ಲೂಕಿಗೆ ಸಂಬಂಧಿಸಿದಂತೆ ಒಂದು ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ. ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ಹೊಳೆನರಸೀಪುರ-ಕೆ.ಆರ್. ನಗರ-ರಾಜ್ಯ ಹೆದ್ದಾರಿಯಿಂದ ಕೆ.ಆರ್. ನಗರ-ಮಳಲಿ-ಹೊಸಕೋಟೆ-ರಾವಂದೂರು ರಸ್ತೆಯನ್ನು ಸೇರುವ ರಸ್ತೆ. ಮಾರ್ಗ: ಬೀರನಹಳ್ಳಿ | 3.50 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 12 ಸಿಆರ್ಎಂ 2007, ಬೆಂಗಳೂರು, ದಿನಾಂಕ: 8ನೇ ಜನವರಿ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ಹೊಳೆನರಸೀಪುರ-ಕೆ.ಆರ್. ನಗರ-ರಾಜ್ಯ ಹೆದ್ದಾರಿಯಿಂದ ಕೆ.ಆರ್. ನಗರ-ಮಳಲಿ-ಹೊಸಕೋಟೆ-ರಾವಂದೂರು ರಸ್ತೆಯನ್ನು ಸೇರುವ ರಸ್ತೆ. ಮಾರ್ಗ: ಬೀರನಹಳ್ಳಿ | 3.50 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 193

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ:** ಬೆಂಗಳೂರು ದಕ್ಷಿಣ ತಾಲ್ಲೂಕಿನ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ:ರಸ್ತೆ: ಮೇಲ್ದರ್ಜೆಗೇರಿಸುವುದು:2006-07, ದಿನಾಂಕ: 30.10.2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಬೆಂಗಳೂರು ದಕ್ಷಿಣ ತಾಲ್ಲೂಕಿನ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಹನ್ನೊಂದು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ. ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ತಿಪ್ಪೂರ್ ಅಂಚೆಪಾಳ್ಯ, ಗೊಲ್ಲಹಳ್ಳಿ | 9.50 |
| 2. | ಚಿನ್ನ ಕುರ್ಚಿಯಿಂದ ಗವಿಯನಪಾಳ್ಯ ಸೇರುವ ರಸ್ತೆ | 5.00 |
| 3. | ಕೆಂಗೇರಿ ಉತ್ತರಹಳ್ಳಿ ರಸ್ತೆಯಿಂದ ಎನ್.ಹೆಚ್.209 ಅಗರ ಮಾರ್ಗವಾಗಿ ಅಗರದಹಳ್ಳಿ ಸಾಲು ಹುಣಸ ಮಾರ್ಗವಾಗಿ ಹೆಮ್ಮಿಗೆಪುರ ರಸ್ತೆ | 15.60 |
| 4. | ಎನ್.ಹೆಚ್. 209 ರಿಂದ ಪ್ರಾರಂಭವಾಗಿ ನೆಟ್ಟಿಗೆರೆ ರಾವುಗೋಡ್ಲು ಮುಖಾಂತರ ರಾವುಗೋಡ್ಲು ಗೇಟ್ ಹತ್ತಿರ ಎನ್.ಹೆಚ್. 209 ಸೇರುವ ರಸ್ತೆ | 6.50 |
| 5. | ನಿಶಾನೆದಿಂದ ತಟಗುಪ್ಪೆ, ಗುಲಕಮಲೈ ನಲ್ಲಕ್ಕನ ದೊಡ್ಡಿ ಮುಖಾಂತರ ತೊಟ್ಟಿಕಲ್ ಉನ್ನೇಶ್ವರ ದೇವಸ್ಥಾನ ಸೇರುವ ರಸ್ತೆ. | 12.30 |
| 6. | ತಟಗುಪ್ಪೆ ರಸ್ತೆಯಿಂದ ವಾಸುದೇವಪುರ ಕುಂಚಿಗರ ಪಾಳ್ಯ ಮುಖಾಂತರ ಎನ್.ಹೆಚ್. 209 ಸೇರುವ ರಸ್ತೆ | 5.30 |
| 7. | ರಾಮನಗರ ತಾ: ಸರಹದ್ದಿನಿಂದ ನಾಗ ನಾಯಕನಹಳ್ಳಿ, ಸೋಮನಹಳ್ಳಿ ಮುಕೋಡ್ಲು ಮುಖಾಂತರ ಕನಕಪುರ ತಾ: ಸರಹದ್ದು ಸೇರುವ ರಸ್ತೆ | 11.85 |

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 8. | ಕಗ್ಗಲೀಪುರ ರಸ್ತೆಯಿಂದ ದಿನ್ನೇಪಾಳ್ಯ, ಬಾಹೆಕಟ್ಟೆ ಮುಖಾಂತರ ಚಿನ್ನ ಕುರ್ಚಿ ಸೇರುವ ರಸ್ತೆ | 7.00 |
| 9. | ಎನ್.ಹೆಚ್. 209 ಯಿಂದ (ವಾಜರಹಳ್ಳಿ ಸಮೀಪ) ಪ್ರಾರಂಭವಾಗಿ ಹೊಸಹಳ್ಳಿ ವೀರಸಂದ್ರ ಮುಖಾಂತರ ಹೆಮ್ಮಿಗೆಪುರ ಸೇರುವ ರಸ್ತೆ | 8.00 |
| 10. | ಬಿ.ಎಂ.ಹೆಚ್. ರಸ್ತೆಯಿಂದ ಕೊಡಿಗೇನಹಳ್ಳಿ, ಕನ್ನಹಳ್ಳಿ, ಕನ್ನಹಳ್ಳಿ ಹೊಸಹಳ್ಳಿ ಮುಖಾಂತರ ಕಿಂಚನಪುರ ಸೇರುವ ರಸ್ತೆ. | 4.50 |
| 11. | ಲಕ್ಷ್ಮೀಪುರ ಕ್ರಾಸ್ ರಸ್ತೆಯಿಂದ ಅಬ್ಬಿಗೆರೆ ಮುಖಾಂತರ ಚಿಕ್ಕಬಾಣಾವರ ಸೇರುವ ರಸ್ತೆ. | 6.00 |
| | **ಒಟ್ಟು** | **91.55** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 339 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 20ನೇ ಜನವರಿ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ 11 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ತಿಪ್ಪೂರ್ ಅಂಚಿಪಾಳ್ಯ, ಗೊಲ್ಲಹಳ್ಳಿ | 9.50 |
| 2. | ಚಿನ್ನ ಕುರ್ಚಿಯಿಂದ ಗವಿಯನಪಾಳ್ಯ ಸೇರುವ ರಸ್ತೆ | 5.00 |
| 3. | ಕೆಂಗೇರಿ ಉತ್ತರಹಳ್ಳಿ ರಸ್ತೆಯಿಂದ ಎನ್.ಹೆಚ್.209 ಅಗರ ಮಾರ್ಗವಾಗಿ ಅಗರದಹಳ್ಳಿ ಸಾಲು ಹುಣಸ ಮಾರ್ಗವಾಗಿ ಹೆಮ್ಮಿಗೆಪುರ ರಸ್ತೆ | 15.60 |
| 4. | ಎನ್.ಹೆಚ್. 209 ರಿಂದ ಪ್ರಾರಂಭವಾಗಿ ನೆಟ್ಟಿಗೆರೆ ರಾವುಗೋಡ್ಲು ಮುಖಾಂತರ ರಾವುಗೋಡ್ಲು ಗೇಟ್ ಹತ್ತಿರ ಎನ್.ಹೆಚ್. 209 ಸೇರುವ ರಸ್ತೆ | 6.50 |
| 5. | ನಿಶಾನೆದಿಂದ ತಟಗುಪ್ಪೆ, ಗುಲಕಮಲೈ ನಲ್ಲಕ್ಕನ ದೊಡ್ಡಿ ಮುಖಾಂತರ ತೊಟ್ಟಿಕಲ್ ಉನ್ನೇಶ್ವರ ದೇವಸ್ಥಾನ ಸೇರುವ ರಸ್ತೆ. | 12.30 |
| 6. | ತಟಗುಪ್ಪೆ ರಸ್ತೆಯಿಂದ ವಾಸುದೇವಪುರ ಕುಂಚಿಗರ ಪಾಳ್ಯ ಮುಖಾಂತರ ಎನ್.ಹೆಚ್. 209 ಸೇರುವ ರಸ್ತೆ | 5.30 |
| 7. | ರಾಮನಗರ ತಾ: ಸರಹದ್ದಿನಿಂದ ನಾಗ ನಾಯಕನಹಳ್ಳಿ, ಸೋಮನಹಳ್ಳಿ ಮುಕೋಡ್ಲು ಮುಖಾಂತರ ಕನಕಪುರ ತಾ: ಸರಹದ್ದು ಸೇರುವ ರಸ್ತೆ | 11.85 |
| 8. | ಕಗ್ಗಲೀಪುರ ರಸ್ತೆಯಿಂದ ದಿನ್ನೇಪಾಳ್ಯ, ಬಾಹೆಕಟ್ಟೆ ಮುಖಾಂತರ ಚಿನ್ನ ಕುರ್ಚಿ ಸೇರುವ ರಸ್ತೆ | 7.00 |
| 9. | ಎನ್.ಹೆಚ್. 209 ಯಿಂದ (ವಾಜರಹಳ್ಳಿ ಸಮೀಪ) ಪ್ರಾರಂಭವಾಗಿ ಹೊಸಹಳ್ಳಿ ವೀರಸಂದ್ರ ಮುಖಾಂತರ ಹೆಮ್ಮಿಗೆಪುರ ಸೇರುವ ರಸ್ತೆ | 8.00 |
| 10. | ಬಿ.ಎಂ.ಹೆಚ್. ರಸ್ತೆಯಿಂದ ಕೊಡಿಗೇನಹಳ್ಳಿ, ಕನ್ನಹಳ್ಳಿ, ಕನ್ನಹಳ್ಳಿ ಹೊಸಹಳ್ಳಿ ಮುಖಾಂತರ ಕಿಂಚನಪುರ ಸೇರುವ ರಸ್ತೆ. | 4.50 |
| 11. | ಲಕ್ಷ್ಮೀಪುರ ಕ್ರಾಸ್ ರಸ್ತೆಯಿಂದ ಅಬ್ಬಿಗೆರೆ ಮುಖಾಂತರ ಚಿಕ್ಕಬಾಣಾವರ ಸೇರುವ ರಸ್ತೆ. | 6.00 |
| | **ಒಟ್ಟು** | **91.55** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 194

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ:** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕಿನಲ್ಲಿ ಉಡುಪಿ ಮತ್ತು ಬ್ರಹ್ಮಾವರ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಯಾದ ಪೇತ್ರಿ-ಕುಕ್ಕೆಹಳ್ಳಿ ಬಜೆಹಿರಿಯಡ್ಕ ರಸ್ತೆಯ ಸರಪಳಿ 0.00 ರಿಂದ 10.50 ಕಿಮೀ.ಉದ್ದದ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ:ರಶಾ: ಸ೪ಂ-4:2006-07, ದಿನಾಂಕ: 12.12.2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕಿನಲ್ಲಿ ಉಡುಪಿ ಮತ್ತು ಬ್ರಹ್ಮಾವರ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಪೇತ್ರಿ-ಕುಕ್ಕೆಹಳ್ಳಿ-ಬಜೆ-ಹಿರಿಯಡ್ಕ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಬ್ರಹ್ಮಾವರ ವಿಧಾನಸಭಾ ಕ್ಷೇತ್ರದ ಪೇತ್ರಿ-ಕುಕ್ಕೆಹಳ್ಳಿ-ಬಜೆ-ಹಿರಿಯಡ್ಕ ಗ್ರಾಮೀಣ ರಸ್ತೆಯಲ್ಲಿ ಸುವರ್ಣ ನದಿಗೆ 3ನೇ ಹಂತದ ಸೇತುವೆ ನಿರ್ಮಾಣ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಅನುಕೂಲವಾಗುವ ಹಿನ್ನೆಲೆಯಲ್ಲಿ ಕಾಮಗಾರಿಯನ್ನು ಕೆ.ಆರ್.ಡಿ.ಸಿ.ಎಲ್ ವತಿಯಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ಪೇತ್ರಿ-ಕುಕ್ಕೆಹಳ್ಳಿ-ಬಜೆ-ಹಿರಿಯಡ್ಕ ರಸ್ತೆ | 10.50 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 360 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 20ನೇ ಜನವರಿ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ಪೇತ್ರಿ-ಕುಕ್ಕೆಹಳ್ಳಿ-ಬಜೆ-ಹಿರಿಯಡ್ಕ ರಸ್ತೆ | 10.50 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 195

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

## ಸಹಕಾರ ಸಚಿವಾಲಯ

**ವಿಷಯ:** ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆ (ನಿ) ಪಾಂಡವಪುರ ಮಂಡ್ಯ ಜಿಲ್ಲೆ ಇವರ 2001-02 ರಿಂದ 2005-06ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1) ರಡಿ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಸಇ 297 ಸಸಕಾ 05 ದಿನಾಂಕ: 1.3.2006.
2) ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ ಡಿಎಸ್‌ಕೆ/ ಇಎಸ್‌ಟಿಎಸ್/ಜೆಬಿಎಂ/2005-06, ದಿನಾಂಕ: 16.9.2006.

**ಪ್ರಸ್ತಾವನೆ:**

ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ ನಿ, ಪಾಂಡವಪುರ ಮಂಡ್ಯ ಜಿಲ್ಲೆ ಇದರ 2001-02 ರಿಂದ 2004-05ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ವಿಸ್ತರಿಸಿ ದಿನಾಂಕ:31.3.2006 ರೊಳಗೆ ನಡೆಸಲು ಮೇಲೆ ಓದಲಾದ ಆದೇಶ (1)ರಲ್ಲಿ ಅನುಮತಿ ನೀಡಲಾಗಿತ್ತು. ಪ್ರಸ್ತುತ ಕಾರ್ಖಾನೆಯ ಆಡಳಿತ ಮಂಡಳಿಯನ್ನು ರದ್ದುಪಡಿಸಿ ವಿಶೇಷಾಧಿಕಾರಿಯನ್ನು ನೇಮಕಾತಿ ಮಾಡಲಾಗಿರುತ್ತದೆ ಮತ್ತು ಕಾರ್ಖಾನೆಯ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲವಾದ್ದರಿಂದ ಕಾರ್ಖಾನೆಯನ್ನು ಮೆ: ಕೊಥಾರಿ ಶುಗರ್ಸ್ ಅಂಡ್ ಕೆಮಿಕಲ್ಸ್ ರವರಿಗೆ 7 ವರ್ಷಗಳ ಅವಧಿಗೆ ಗುತ್ತಿಗೆಗೆ ನೀಡಲಾಗಿದೆ. ಈ ಕಾರಣಗಳಿಂದ ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಪಾಂಡವಪುರ ಇದರ 2001-02 ರಿಂದ 2005-06ರ ವರೆಗಿನ ಸಾಲುಗಳ ಸರ್ವ ಸದಸ್ಯರ ಮಹಾ ಸಭೆಯನ್ನು ನಡೆಸಲು ದಿನಾಂಕ: 30.9.2007 ರವರೆಗೆ ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27 (1)ರ ಅಡಿಯಲ್ಲಿ ಅನುಮತಿ ನೀಡುವಂತೆ ಮೇಲೆ ಓದಲಾದ ಪತ್ರ (2)ರಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಈ ಕಾರ್ಖಾನೆಯ ವಾರ್ಷಿಕ ಮಹಾಸಭೆಯನ್ನು ದಿನಾಂಕ:30.9.2007 ರೊಳಗೆ ನಡೆಸಲು ಅನುವಾಗುವಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 259 ಸಸಕಾ 2006, ಬೆಂಗಳೂರು ದಿನಾಂಕ: 16ನೇ ಜನವರಿ 2007**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಪಾಂಡವಪುರ ಸಹಕಾರಿ ಸಕ್ಕರೆ ಕಾರ್ಖಾನೆ (ನಿ) ಪಾಂಡವಪುರ, ಮಂಡ್ಯ ಜಿಲ್ಲೆ ಇದರ 2001-02 ರಿಂದ 2005-06ನೇ ಸಾಲುಗಳ ವಾರ್ಷಿಕ ಸರ್ವ ಸದಸ್ಯರ ಮಹಾಸಭೆಯನ್ನು ನಡೆಸಲು ದಿನಾಂಕ:30.9.2007 ರವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ.

**27ರ ಪ್ರಕರಣದಲ್ಲಿ**

27ನೇ ಪ್ರಕರಣದಲ್ಲಿ ಉಪ ಪ್ರಕರಣ (1)ರ ಪರಂತುಕದಲ್ಲಿನ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಈ ಕೆಳಕಂಡ ತಿಂಗಳುಗಳು ಎಂಬ ಪದಗಳಿಗೆ ಬದಲಿಸಿ ಪ್ರತಿಯೋಜಿಸತಕ್ಕದ್ದು.

| ವರ್ಷಕ್ಕೆ ಸಂಬಂಧಪಟ್ಟಂತೆ | ಪ್ರಕರಣ 27ರ ಪರಂತುಕದಲ್ಲಿ ನಿಗದಿಪಡಿಸಿರುವ ಅವಧಿಯನ್ನು ಹೆಚ್ಚಿಸಿರುವ ಅವಧಿ |
|---|---|
| 2001-02 | 69 ತಿಂಗಳುಗಳು |
| 2002-03 | 57 ತಿಂಗಳುಗಳು |
| 2003-04 | 45 ತಿಂಗಳುಗಳು |
| 2004-05 | 33 ತಿಂಗಳುಗಳು |
| 2005-06 | 21 ತಿಂಗಳುಗಳು |
| 2006-07 | 9 ತಿಂಗಳುಗಳು |

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 30.9.2007ರ ವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಾಣದ ರಂಗಪ್ಪ**

ಪಿ.ಆರ್. 196

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

**ವಿಷಯ:** ಪಿರಿಯಾ ಪಟ್ಟಣ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಎಂಡಬ್ಲ್ಯೂ/22/ಎಂಡಿಎಸ್/92 ದಿನಾಂಕ: 3.1.1994
2) ಸರ್ಕಾರದ ಆದೇಶ ಸಂಖ್ಯೆ:ಸಇ/271/ಮಾಇಸೇ/2005 ದಿನಾಂಕ: 5.4.2006
3) ಕೃಷಿ ಮಾರಾಟ ಇಲಾಖೆಯ ಆಯುಕ್ತರ ಪತ್ರ ಸಂಖ್ಯೆ:ಕೃಮಾಇ/350/ಸಿಬ್ಬಂದಿ-1(ಸಿ)2006 ದಿನಾಂಕ:1.12.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿನ ದಿನಾಂಕ: 3.1.1994ರ ಸರ್ಕಾರಿ ಆದೇಶದಲ್ಲಿ ಪಿರಿಯಾ ಪಟ್ಟಣ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ರಚಿಸಲಾಗಿತ್ತು.

| ಕ್ರ. ಸಂ. | ಸೃಜಿಸಲಾದ ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 1 |
| 2 | ಲೆಕ್ಕಿಗರು | 1 |
| 3 | ಮಾರುಕಟ್ಟೆಮೇಲ್ವಿಚಾರಕರು ದರ್ಜೆ-3 | 3 |
| 4 | ಮಾರುಕಟ್ಟೆ ಮೇಲ್ವಿಚಾರಕರು ದರ್ಜೆ-4 | 2 |
| 5 | ವಾಹನ ಚಾಲಕ | 1 |
| 6 | ಸಿಪಾಯಿ | 3 |
| | **ಒಟ್ಟು** | **11** |

ಮೇಲ್ಕಂಡ ಸಮಿತಿಯನ್ನು ಹುದ್ದೆಗಳೊಂದಿಗೆ ಕಾಲಕಾಲಕ್ಕೆ ಮುಂದುವರೆಸಲಾಗಿದ್ದು, ಮೇಲೆ ಓದಲಾದ ಕ್ರಮಾಂಕ (2)ರಲ್ಲಿನ ಆದೇಶದಲ್ಲಿ ಸದರಿ ಸಮಿತಿಯನ್ನು ಹುದ್ದೆಗಳೊಂದಿಗೆ ದಿನಾಂಕ:31.1.2007 ರವರೆಗೆ ಮುಂದುವರೆಸಲಾಗಿದೆ. ಸದರಿ ಹುದ್ದೆಗಳನ್ನು ಖಾಯಂಗೊಳಿಸುವಂತೆ ಅಥವಾ ಮುಂದಿನ 2 ವರ್ಷಗಳಿಗೆ ಮುಂದುವರೆಸುವಂತೆ ಕೃಷಿ ಮಾರಾಟ ಇಲಾಖೆಯ ಆಯುಕ್ತರು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಇ 385 ಮಾಇಸೇ 2006, ಬೆಂಗಳೂರು, ದಿನಾಂಕ: 12ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪಿರಿಯಾಪಟ್ಟಣ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ:1.2.2007 ರಿಂದ 31.1.2008 ರವರೆಗೆ 1 ವರ್ಷದ ಅವಧಿಗೆ ಮಾತ್ರ ಮುಂದುವರೆಸಿದೆ.

| ಕ್ರ. ಸಂ. | ಸೃಜಿಸಲಾದ ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಯದರ್ಶಿ | 1 |
| 2 | ಲೆಕ್ಕಿಗರು | 1 |
| 3 | ಮಾರುಕಟ್ಟೆಮೇಲ್ವಿಚಾರಕರು ದರ್ಜೆ-3 | 3 |
| 4 | ಮಾರುಕಟ್ಟೆ ಮೇಲ್ವಿಚಾರಕರು ದರ್ಜೆ-4 | 2 |
| 5 | ವಾಹನ ಚಾಲಕ | 1 |
| 6 | ಸಿಪಾಯಿ | 3 |
| | **ಒಟ್ಟು** | **11** |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ-3475-ಇತರೆ ಸಾಮಾನ್ಯ ಆರ್ಥಿಕ ಸೇವೆ-107-ಮಾರುಕಟ್ಟೆಗಳ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಯು (ಯೋಜನೇತರ) ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ ಸಇ 160 ಅಂಆಸ (ಎ) 07 ದಿನಾಂಕ: 8.1.2007 ರಲ್ಲಿ ನೀಡಿರುವ ಸಹಮತಿಯೊಂದಿಗೆ ಮತ್ತು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/01/ಟಿಎಫ್‌ಪಿ ದಿನಾಂಕ:10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 197

**ಕೆ. ಸಾಂಬಶಿವಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪ್ರಾಣೇಶ್‌ರೊಟ್ಟಿ, ಪಿಎಸ್‌ಐ, ರಾಯಚೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಉಲ್ಲೇಖ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು, ಇದರ ಆದೇಶ ಸಂಖ್ಯೆ:ಸಿಬ್ಬಂದಿ/3/ಪಿಆರ್-64/2005, ಓಬಿ ಸಂಖ್ಯೆ:701/2005, ದಿನಾಂಕ:7.7.2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು/109/ಈವ/2005, ಓಬಿ ದಿನಾಂಕ:26.12.2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11.3.2006.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/70/2006-07, ದಿನಾಂಕ:24.7.2006.

**ಪ್ರಸ್ತಾವನೆ:**

ಶ್ರೀ ಪ್ರಾಣೇಶ್‌ರೊಟ್ಟಿ, ಪಿಎಸ್‌ಐ, ರಾಯಚೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1. ದೋಷರೋಪಣೆ:**

"ನೇತಾಜಿನಗರ, ಪೊಲೀಸ್ ಠಾಣೆ, ಗುನ್ಹೆ ಸಂಖ್ಯೆ:13:2005, ಕಲಂ 324, 504 ಐಪಿಸಿ ಪ್ರಕರಣದಲ್ಲಿಯ ಆರೋಪಿ ಬಾಬು ರವರನ್ನು ದಸ್ತಗೀರ ಮಾಡಿ ನ್ಯಾಯಾಂಗ ಬಂಧನಕ್ಕೆ ಕಳುಹಿಸಿ ದಿನಾಂಕ:28.2.2005ರ ನಂತರ ಆರೋಪಿಯ ನ್ಯಾಯಾಂಗ ಬಂಧನವನ್ನು ಮುಂದುವರೆಸಲು ನ್ಯಾಯಾಲಯಕ್ಕೆ ಮನವಿ ಸಲ್ಲಿಸಲು ವಿಫಲರಾಗಿದ್ದರಿಂದ ಆರೋಪಿಯನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಿರುವುದು ಹಾಗೂ ಆರೋಪಿಯನ್ನು ದಸ್ತಗಿರಿ ಮಾಡಿದ ಬಗ್ಗೆ ಠಾಣೆಯ ದಿನಚರಿಯಲ್ಲಿ ನಮೂದಿಸದೇ, ಸಿಆರ್‌ಪಿಸಿ 50 ಪ್ರಕಾರ ನೋಟೀಸ್ ಜಾರಿ ಮಾಡದೇ ಕರ್ತವ್ಯದಲ್ಲಿ ಘೋರ ಅಲಕ್ಷತೆಯನ್ನು ಮತ್ತು ಕರ್ತವ್ಯಲೋಪವನ್ನು ಎಸಗಿದ ಆಪಾದನೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು, ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:7.7.2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಎರಡು (2) ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:26.12.2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಾವು ಚುನಾವಣೆ ಬಂದೋಬಸ್ತ್ ಕರ್ತವ್ಯದಲ್ಲಿದ್ದರೆ, ಠಾಣೆಗೆ ದೂರವಾಣಿ ಮಾಡಿ, ಆರೋಪಿಯನ್ನು ನ್ಯಾಯಾಂಗ ಬಂಧನದಲ್ಲಿ ಮುಂದುವರೆಸಲು, ನ್ಯಾಯಾಲಯಕ್ಕೆ ಮನವಿ ಸಲ್ಲಿಸಲು ಸೂಚಿಸಬೇಕಾಗಿತ್ತು. ತಾವೇ ಸದರಿ ಗುನ್ಹೆಯಲ್ಲಿ ತನಿಖಾಧಿಕಾರಿಯಾಗಿದ್ದು, ಆರೋಪಿಯು ನ್ಯಾಯಾಂಗ ಬಂಧನದಲ್ಲಿದ್ದಾಗ ಆ ಕಡೆ ಗಮನ ಹರಿಸದಿರುವುದು ಕಂಡುಬರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 473 ಪೊಸಿಅ 2006, ಬೆಂಗಳೂರು, ದಿನಾಂಕ: 12ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪ್ರಾಣೇಶ್‌ರೊಟ್ಟಿ, ಪಿಎಸ್‌ಐ ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:11.3.2006ರ ಪರಿಷ್ಕರಣ ಮೇಲ್ಮನವಿ ಅರ್ಜಿನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 198

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ರೇಷ್ಮೆ ಇಲಾಖೆಯ ಶ್ರೀ ಹೆಚ್.ಎಸ್. ಲಕ್ಷ್ಮೀನಾರಾಯಣ ರಾವ್, ರೇಷ್ಮೆ ನಿರೀಕ್ಷಕರು ಇವರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ: 1-9-2003.

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ: 17-5-2004.

3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ: 21-6-2004.

4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ: 8-9-2004.

5) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಇವಿ 2004, ದಿನಾಂಕ: 17-2-2005.

6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಇವಿ 2004, ದಿನಾಂಕ: 31-3-2005.

7) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಇವಿ 2004, ದಿನಾಂಕ: 24-12-2005.

8) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಎಸ್‌ಡಿಇ 2004, ದಿನಾಂಕ: 5-1-2007.

9) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ:ಸಿಬ್ಬಂದಿ1(8)/ವಿಆರ್‌ಎಸ್/131/2003-04, ದಿನಾಂಕ:17-12-2004.

10) ಸರ್ಕಾರಿ ಆದೇಶ ಸಂಖ್ಯೆ: ವಾಕೈ 127 ರೇಇವಿ 2004, ದಿನಾಂಕ: 12-11-2004.

11) ಸರ್ಕಾರಿ ಆದೇಶ ಸಂಖ್ಯೆ: ವಾಕೈ 187 ರೇಇವಿ 2004, ದಿನಾಂಕ: 10-2-2006.

12) ಸರ್ಕಾರಿ ಆದೇಶ ಸಂಖ್ಯೆ: ವಾಕೈ 82 ರೇಇವಿ 2006, ದಿನಾಂಕ: 7-11-2006.

13) ಸರ್ಕಾರಿ ಆದೇಶ ಸಂಖ್ಯೆ: ವಾಕೈ 241 ರೇಇವಿ 2006, ದಿನಾಂಕ: 13-12-2006.

14) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ:ಸಿ1(6)/ರೇನಿ/ವಿಸ್ವನಿ/19/2003-04, ದಿನಾಂಕ:11-12-2006.

**ಪ್ರಸ್ತಾವನೆ:**

ರಾಜ್ಯ ಸರ್ಕಾರದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಜಾರಿಗೊಳಿಸಲಾಗಿದೆ. ಹಾಗೂ ಮೇಲೆ ಓದಲಾದ ಕ್ರಮಸಂಖ್ಯೆ (2) ರಿಂದ ಕ್ರಮಸಂಖ್ಯೆ (8)ರ ಆದೇಶಗಳಲ್ಲಿ ಸದರಿ ಆದೇಶಕ್ಕೆ ಕೆಲವು ಮಾರ್ಪಾಡುಗಳನ್ನು ಮಾಡಲಾಗಿದೆ. ಈ ಯೋಜನೆಯನ್ವಯ ರೇಷ್ಮೆ ಇಲಾಖೆಯು ತನ್ನ ಇಲಾಖೆಯಲ್ಲಿ ಹೆಚ್ಚುವರಿ ಹುದ್ದೆಗಳನ್ನು ಗುರುತಿಸಿರುವ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (9)ರ ಪತ್ರದಲ್ಲಿ ರೇಷ್ಮೆ ಆಯುಕ್ತರು ತಿಳಿಸಿರುತ್ತಾರೆ. ಈ ಹೆಚ್ಚುವರಿ ಹುದ್ದೆಗಳಲ್ಲಿ ಈಗಾಗಲೇ ಮೇಲೆ ಓದಲಾದ ಕ್ರಮ ಸಂಖ್ಯೆ (10)ರ ಆದೇಶದಲ್ಲಿ 173 ಅಧಿಕಾರಿ/ನೌಕರರುಗಳಿಗೆ, ಕ್ರಮ ಸಂಖ್ಯೆ (11)ರ ಆದೇಶದಲ್ಲಿ 156 ಅಧಿಕಾರಿ/ನೌಕರರುಗಳಿಗೆ ಮತ್ತು ಕ್ರಮ ಸಂಖ್ಯೆ (12)ರ ಆದೇಶದಲ್ಲಿ 72 ಅಧಿಕಾರಿ/ನೌಕರರುಗಳಿಗೆ ಹಾಗೂ ಕ್ರಮ ಸಂಖ್ಯೆ (13)ರ ಆದೇಶದಲ್ಲಿ 4 ಅಧಿಕಾರಿ/ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಅನುಮತಿ ನೀಡಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (14)ರ ಪತ್ರದಲ್ಲಿ ರೇಷ್ಮೆ ಆಯುಕ್ತರು ಶ್ರೀ ಹೆಚ್.ಎಸ್. ಲಕ್ಷ್ಮೀನಾರಾಯಣ ರಾವ್, ರೇಷ್ಮೆ ನಿರೀಕ್ಷಕರು, ರೇಷ್ಮೆ ಬಿತ್ತನೆ ಕೋಠಿ, ವಿ.ಜಿ. ದೊಡ್ಡಿ ಇವರು ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಹಿಂದೆಯೇ ಅನುಮತಿ ಕೋರಿದ್ದ ಬಗ್ಗೆ ತಿಳಿಸಿ ಇವರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿಯಲ್ಲಿ ನಿವೃತ್ತಿ ಹೊಂದಲು ಅನುಮತಿ ನೀಡಲು ಹಾಗೂ ರೇಷ್ಮೆ ಕೃಷಿ ಕ್ಷೇತ್ರ, ಸೋವೇನಹಳ್ಳಿಯ ರೇಷ್ಮೆ ನಿರೀಕ್ಷಕರ ಹುದ್ದೆಯನ್ನು ರದ್ದುಗೊಳಿಸಲು ಸರ್ಕಾರದ ಅನಮೋದನೆ ನೀಡುವಂತೆ ಕೋರಿರುತ್ತಾರೆ.

ರೇಷ್ಮೆ ಆಯುಕ್ತರ ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಅವರ ಶಿಫಾರಸ್ಸಿನಂತೆ ಶ್ರೀ ಹೆಚ್.ಎಸ್. ಲಕ್ಷ್ಮೀನಾರಾಯಣ ರಾವ್, ರೇಷ್ಮೆ ನಿರೀಕ್ಷಕರು ಇವರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 82 ರೇಇವಿ 2006, ಬೆಂಗಳೂರು, ದಿನಾಂಕ: 20ನೇ ಜನವರಿ 2007**

ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ: 1.9.2003 ಹಾಗೂ ತದನಂತರ ಈ ಆದೇಶಕ್ಕೆ ಮಾಡಿರುವ ತಿದ್ದುಪಡಿಗಳಲ್ಲಿಯ ಷರತ್ತುಗಳನ್ನು ಪೂರೈಸಬೇಕೆನ್ನುವ ಷರತ್ತಿಗೊಳಪಟ್ಟು ರೇಷ್ಮೆ ಇಲಾಖೆಯ ಶ್ರೀ ಹೆಚ್.ಎಸ್. ಲಕ್ಷ್ಮೀನಾರಾಯಣ ರಾವ್ , ರೇಷ್ಮೆ ನಿರೀಕ್ಷಕರು, ರೇಷ್ಮೆ ಬಿತ್ತನೆ ಕೋಠಿ, ವಿ.ಜಿ. ದೊಡ್ಡಿ, ಇವರಿಗೆ ದಿನಾಂಕ: 31.1.2007 ರ ಅಪರಾಹ್ನದಿಂದ ಜಾರಿಗೆ ಬರುವಂತೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂಲು ಅನುಮತಿ ನೀಡಲಾಗಿದೆ. ಮತ್ತು ಇದರಿಂದಾಗಿ ರದ್ದತಿಗಾಗಿ ಹೆಚ್ಚುವರಿಯೆಂದು ಗುರುತಿಸಿರುವ ರೇಷ್ಮೆ ಕೃಷಿ ಕ್ಷೇತ್ರ, ಸೋವೇನಹಳ್ಳಿಯ ರೇಷ್ಮೆ ನಿರೀಕ್ಷಕರ ಹುದ್ದೆಯು ದಿನಾಂಕ:31.1.2007ರ ಅಪರಾಹ್ನದಿಂದ ಜಾರಿಗೆ ಬರುವಂತೆ ರದ್ದಾಗುತ್ತದೆ. ರದ್ದಾಗುವ ಈ ಹುದ್ದೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ನೌಕರರಿಗೆ ಸೂಕ್ತ ಪರ್ಯಾಯ ಸ್ಥಳವನ್ನು ಇಲಾಖೆಯ ನೀಡತಕ್ಕದ್ದು.

ಈ ನೌಕರರ ವಿಶೇಷ ಸ್ವಯಂ ನಿವೃತ್ತಿಗಾಗಿ ಅಗತ್ಯವಿರುವ ಮೊತ್ತವನ್ನು ಲೆಕ್ಕಶೀರ್ಷಿಕೆ "2071-Pension and other retirement benefits-01-Civil-200-other pensions-2-Special VR Scheme-01-Ex-gratia-251-Pension and Retirement Benefits (2071-01-200-2-01-251)" ರಡಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್. 200

## ಸಾರ್ವಜನಿಕ ಉದ್ದಿಮೆಗಳ ಸಚಿವಾಲಯ

**ಸರ್ಕಾರದ ಆದೇಶ ಸಂಖ್ಯೆ: ಡಿಪಿಇ 99 ಎಆರ್‌ಯು 2003, ದಿನಾಂಕ: 19ನೇ ಜನವರಿ 2007**

**ವಿಷಯ:** ಕರ್ನಾಟಕ ಕೃಷಿ ಕೈಗಾರಿಕಾ ನಿಗಮದ ನೌಕರರ ವೇತನ ಬಾಕಿಗಾಗಿ ಮತ್ತು ನಿವೃತ್ತಿ ಹೊಂದಿದ ನೌಕರರಿಗೆ ಟರ್ಮಿನಲ್ ಪರಿಹಾರಕ್ಕಾಗಿ ಹಣ ಬಿಡುಗಡೆ ಮಾಡುವ ಹಾಗೂ 1999-2000ದ ಸ್ವಯಂ ನಿವೃತ್ತಿ ಯೋಜನೆಯಡಿ ಮಾಸಿಕ ಶೇ.80 ದರದ ವೇತನ ಬಾಕಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಡಿಪಿಇ 99 ಎಆರ್‌ಯು 2003, ದಿನಾಂಕ: 9.1.2007.

ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 9.1.2007 ಇದರಲ್ಲಿನ ಎರಡನೇ ಪುಟದಲ್ಲಿರುವ ಕಂಡಿಕೆ 4ರಲ್ಲಿ ಇರುವ

"ಈ ಹಣವನ್ನು ಉಪಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆ, ಬೆಂಗಳೂರು ಇವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ಡ್ರಾ ಮಾಡುವುದು. ಈ ಮೊತ್ತವನ್ನು 2006-07ನೇ ಸಾಲಿನ ಲೆಕ್ಕ ಶೀರ್ಷಿಕೆ 6852-02-119-4-02 (ಎನ್‌ಪಿ) 394 ಲೋನ್ಸ್ ಸ್ಟೇಟ್ ರಿನಿವಲ್ ಫಂಡ್‌ನಿಂದ ಬಿಡುಗಡೆ ಮಾಡಲಾಗಿದೆ." ಎಂಬುದರ ಬದಲಾಗಿ

ಈ ಹಣವನ್ನು ಕೃಷಿ ನಿರ್ದೇಶಕರು, ಕೃಷಿ ಇಲಾಖೆ, ಬೆಂಗಳೂರು ಇವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ಡ್ರಾ ಮಾಡುವುದು. ಈ ಮೊತ್ತವನ್ನು 2006-07ನೇ ಸಾಲಿನ ಲೆಕ್ಕ ಶೀರ್ಷಿಕೆ 6852-02-119-4-02 (ಎನ್‌ಪಿ) 394 ಲೋನ್ಸ್ ಸ್ಟೇಟ್ ರಿನಿವಲ್ ಫಂಡ್‌ನಿಂದ ಬಿಡುಗಡೆ ಮಾಡಲಾಗಿದೆ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಾರಾಯಣ ಕೆ. ನಾಯಕ**

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),

ಸಾರ್ವಜನಿಕ ಉದ್ದಿಮೆಗಳ ಇಲಾಖೆ.

ಪಿ.ಆರ್. 201

**ತಿದ್ದುಪಡಿ ಆದೇಶ**

**ಸಂಖ್ಯೆ: ಡಿಪಿಇ 17 ಎಆರ್‌ಯು 2006, ದಿನಾಂಕ: 19ನೇ ಜನವರಿ 2007**

**ವಿಷಯ:** ಕರ್ನಾಟಕ ರೇಷ್ಮೆ ಉದ್ಯಮಗಳ ನಿಗಮ ನಿಯಮಿತದ ಹೆಚ್ಚುವರಿ ನೌಕರರ ಸ್ವಯಂ ನಿವೃತ್ತಿಯಿಂದಾಗಿ ನೀಡಬೇಕಾದ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಡಿಪಿಇ 17 ಎಆರ್‌ಯು 2006, ಬೆಂಗಳೂರು, ದಿನಾಂಕ: 6.1.2007.

ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 6.1.2007 ಇದರಲ್ಲಿನ ಎರಡನೇ ಪುಟದಲ್ಲಿರುವ ಕಂಡಿಕೆ 4ರಲ್ಲಿ ಇರುವ

"ಈ ಹಣವನ್ನು ಉಪಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆಗಳ ಇಲಾಖೆ, ಇವರ ಮೇಲು ರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ಪಡೆಯಬಹುದಾಗಿದೆ" ಎಂಬುದರ ಬದಲಾಗಿ

ಈ ಹಣವನ್ನು ಆಯುಕರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆಯಿಂದ ಹಣ ಪಡೆಯಬಹುದಾಗಿದೆ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಾರಾಯಣ ಕೆ. ನಾಯಕ**

ಪಿ.ಆರ್. 202

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),
ಸಾರ್ವಜನಿಕ ಉದ್ದಿಮೆಗಳ ಇಲಾಖೆ.

**ಶಿಕ್ಷಣ ಸಚಿವಾಲಯ**

**ತಿದ್ದೋಲೆ ಸಂಖ್ಯೆ: ಇಡಿ 170 ಎಲ್‌ಐಬಿ 2006, ಬೆಂಗಳೂರು, ದಿನಾಂಕ: 22ನೇ ಜನವರಿ 2007**

ದಿನಾಂಕ:27.11.2006ರ ಸರ್ಕಾರದ ಆದೇಶ ಸಂಖ್ಯೆ: ಇಡಿ 170 ಎಲ್‌ಐಬಿ 2006ರಲ್ಲಿನ ಕಂಡಿಕೆ 3(1)ಲ್ಲಿನ "ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿ ಖರೀದಿಸುವ ಪುಸ್ತಕಗಳಿಗೆ, ತಕ್ಷಣದಿಂದ ಜಾರಿಗೆ ಬರುವಂತೆ, ಈ ಕೆಳಕಂಡ ಬೆಲೆಗಳನ್ನು ನಿಗದಿಪಡಿಸಿ ಆದೇಶಿಸಿದೆ", ಎಂಬ ಪದಗಳ ಬದಲಾಗಿ, "ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿ ಈ ಆದೇಶದ ದಿನಾಂಕದಿಂದ ಮುಂದಕ್ಕೆ ಆಯ್ಕೆ ಮಾಡಿ ಖರೀದಿಸುವ ಪುಸ್ತಕಗಳಿಗೆ ಈ ನಿಗದಿಪಡಿಸಿದ ಬೆಲೆಗಳು ನಿಯಮಗಳು ಅನ್ವಯಿಸುತ್ತದೆ." ಎಂಬ ಪದಗಳನ್ನು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಪಿ.ಆರ್. 203

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಪಸಂಮೀ 197 ಮೀಇಇ 2006, ಬೆಂಗಳೂರು, ದಿನಾಂಕ: 20ನೇ ಜನವರಿ 2007**

ಸರ್ಕಾರದ ಆದೇಶ ಸಂಖ್ಯೆ:ಪಸಂಮೀ/236/ಮೀಇಇ/2002 ದಿನಾಂಕ: 6.12.2002ರ ಆದೇಶ ಭಾಗದಲ್ಲಿನ 2ನೇ ಕಂಡಿಕೆಯಲ್ಲಿರುವ "ದೊಡ್ಡ ಗಾತ್ರದ ದೋಣಿಗಳ ನಿರ್ಮಾಣಕ್ಕಾಗಿ ಸಾಧ್ಯತಾ ಪ್ರಮಾಣ ಪತ್ರವನ್ನು ನೀಡುವ ಸಂಬಂಧ 02 ಜಿಲ್ಲೆಗಳಿಗೆ ತಲಾ 50 ರಂತೆ ವಾರ್ಷಿಕ ಗುರಿಯನ್ನು ನಿಗದಿಪಡಿಸಿ ಆದೇಶಿಸಿದೆ".

**ಎರಡು ಜಿಲ್ಲೆಗಳಿಗೆ ನಿಗದಿಪಡಿಸಲಾದ ವಾರ್ಷಿಕ ಗುರಿ**

| ಕ್ರ. ಸಂ. | ವಿವರ | ದಕ್ಷಿಣ ಕನ್ನಡ ಜಿಲ್ಲೆ | ಉಡುಪಿ ಜಿಲ್ಲೆ | ಒಟ್ಟು |
|---|---|---|---|---|
| 1 | 36 ಅಡಿವರೆಗಿನ ಉದ್ದದ ದೋಣಿಗಳು | 05 | 15 | 20 |
| 2 | 36 ಅಡಿಗಿಂತ ಅಧಿಕ ಉದ್ದ ಮತ್ತು 48 ಅಡಿವರೆಗೆ ಉದ್ದ ದೋಣಿಗಳು | 10 | 20 | 30 |
| 3 | 48 ಅಡಿಗಿಂತ ಅಧಿಕ ಉದ್ದದ ದೋಣಿಗಳು | 35 | 15 | 50 |
| | **ಒಟ್ಟು** | **50** | **50** | **100** |

ಎಂಬುದರ ಬದಲಾಗಿ ಕೆಳಕಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ತಿದ್ದಿ ಓದಿಕೊಳ್ಳತಕ್ಕದ್ದು.

**ಎರಡು ಜಿಲ್ಲೆಗಳಿಗೆ ನಿಗದಿಪಡಿಸಲಾದ ವಾರ್ಷಿಕ ಗುರಿ**

| ಕ್ರ. ಸಂ. | ವಿವರ | ದಕ್ಷಿಣ ಕನ್ನಡ ಜಿಲ್ಲೆ | ಉಡುಪಿ ಜಿಲ್ಲೆ | ಒಟ್ಟು |
|---|---|---|---|---|
| 1 | 36 ಅಡಿವರೆಗಿನ ಉದ್ದದ ದೋಣಿಗಳು | 05 | 05 | 10 |
| 2 | 36 ಅಡಿಗಿಂತ ಅಧಿಕ ಉದ್ದ ಮತ್ತು 48 ಅಡಿವರೆಗೆ ಉದ್ದ ದೋಣಿಗಳು | 10 | 10 | 20 |
| 3 | 48 ಅಡಿಗಿಂತ ಅಧಿಕ ಉದ್ದದ ದೋಣಿಗಳು | 15 | 15 | 30 |
| | **ಒಟ್ಟು** | **30** | **30** | **60** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಸಾಯಿಬಾಬಾ**

ಪಿ.ಆರ್. 204

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಪಸುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಸರ್ಕಾರದ ಆದೇಶ ಸಂಖ್ಯೆ:ಆಕುಕ 319 ಸಿಜಿಇ 2006, ಬೆಂಗಳೂರು, ದಿನಾಂಕ: 18ನೇ ಜನವರಿ 2007**

**ವಿಷಯ:** ರಾಜ್ಯದ ಎಲ್ಲಾ ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಆರೋಗ್ಯ ರಕ್ಷಾ ಸಮಿತಿಗಳನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಆಕುಕ 445 ಆಯೋಸಂ 2002 ದಿನಾಂಕ:22.8.03.

2) ಸರ್ಕಾರದ ಆದೇಶ ಸಂಖ್ಯೆ:ಆಕುಕ 1025 ಸಿಜಿಎಂ 2005 ದಿನಾಂಕ:21.2.2004.

3) ಸರ್ಕಾರದ ಆದೇಶ ಸಂಖ್ಯೆ:ಆಕುಕ 201 ಸಿಜಿಇ 2005 ದಿ:25.5.05 ಮತ್ತು ದಿನಾಂಕ:24.6.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1) ರಲ್ಲಿನ ಸರ್ಕಾರದ ಆದೇಶದಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯ ಆಸ್ಪತ್ರೆಗಳಲ್ಲಿ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯ ಪ್ರಧಾನ ಆಸ್ಪತ್ರೆಗಳಲ್ಲಿ ಮತ್ತು ಜಿಲ್ಲಾ ಆಸ್ಪತ್ರೆಗಳ ಜೊತೆಯಲ್ಲಿ ತಾಲ್ಲೂಕಿನಲ್ಲಿರುವ ಎಲ್ಲಾ ವೈದ್ಯಕೀಯ ಸಂಸ್ಥೆಗಳು ಒಳಪಡುವಂತೆ ಪ್ರತೀ ತಾಲ್ಲೂಕಿಗೂ ತಾಲ್ಲೂಕು ಮಟ್ಟದ ಆರೋಗ್ಯ ರಕ್ಷಾ ಸಮಿತಿಗಳನ್ನು ಮೆಮೊರಂಡಮ್ ಆಫ್ ಅಸೋಸಿಯೇಷನ್ ಮತ್ತು ಬೈಲಾಗಳಲ್ಲಿ ನಿಗದಿಪಡಿಸಿರುವ ಅನ್ವಯ ಪ್ರತ್ಯೇಕವಾಗಿ ರಚಿಸಲು ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿನ ಸರ್ಕಾರಿ ಆದೇಶದಲ್ಲಿ ಈ ಆರೋಗ್ಯ ರಕ್ಷಾ ಸಮಿತಿಯನ್ನು ರಚಿಸಲು ಮೆಮೊರಂಡಮ್ ಆಫ್ ಅಸೋಸಿಯೇಷನ್ ಮತ್ತು ಬೈಲಾಗಳ ಅನುಸಾರ ಕರ್ನಾಟಕ ಸೊಸೈಟೀಸ್ ರಿಜಿಸ್ಟ್ರೇಷನ್ ಆಕ್ಟ್ 1960ರ ಪ್ರಕಾರ ಯೂಸರ್ಸ್ ಚಾರ್ಜ್‌ನಿಂದ ನೊಂದಣಿ ಮಾಡಿಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿನ ಸರ್ಕಾರದ ಆದೇಶದಲ್ಲಿ ಕ್ರಮಸಂಖ್ಯೆಯ (2)ರಲ್ಲಿನ ಆದೇಶವನ್ನು ಮಾರ್ಪಡಿಸಿ ಜಿಲ್ಲೆ:ತಾಲ್ಲೂಕು:ಸಮುದಾಯ ಆರೋಗ್ಯ ಕೇಂದ್ರಗಳ ಮಟ್ಟದ ಆಸ್ಪತ್ರೆಗಳಲ್ಲಿ ಆರೋಗ್ಯ ರಕ್ಷಾ ಸಮಿತಿಗಳಿಗೆ ಹೆಚ್ಚುವರಿ ಸದಸ್ಯರುಗಳನ್ನು ನಾಮ ನಿರ್ದೇಶನ ಮಾಡಿ ಆದೇಶಿಸಿದೆ.

ಈಗಾಗಲೇ ಕ್ರಮಸಂಖ್ಯೆ (1) ಮತ್ತು (3)ರಲ್ಲಿನ ಸರ್ಕಾರದ ಆದೇಶದಲ್ಲಿ ರಚಿಸಲಾದ ತಾಲ್ಲೂಕು ಮಟ್ಟದ ಆರೋಗ್ಯ ರಕ್ಷಾ ಸಮಿತಿಗಳನ್ನು ಪುನರ್ ರಚಿಸುವುದು ಅವಶ್ಯಕವೆಂದು ಸರ್ಕಾರವು ಅಭಿಪ್ರಾಯ ಪಟ್ಟಿದೆ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ:ಆಕುಕ 445 ಆಯೋಸಂ 2002 ದಿ:22.8.03 ಮತ್ತು ಸರ್ಕಾರದ ಆದೇಶ ಸಂಖ್ಯೆ:ಆಕುಕ 201 ಸಿಜಿಇ 2005 ದಿ:25.5.2005/24.6.2005 ರಲ್ಲಿ ರಚಿಸಿದ ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿನ ಆರೋಗ್ಯ ರಕ್ಷಾ ಸಮಿತಿಗಳನ್ನು ಕೆಳಕಂಡಂನತೆ ಪುನರ್ ರಚಿಸಿ ನಾಮ ನಿರ್ದೇಶನ ಮಾಡಲು ಆದೇಶಿಸಿದೆ.

**ತಾಲ್ಲೂಕು ಮಟ್ಟದ ಆಸ್ಪತ್ರೆಗಳಿಗೆ ಆರೋಗ್ಯ ರಕ್ಷಾ ಸಮಿತಿ**

| | | | |
|---|---|---|---|
| 1) | ವಿಧಾನಸಭಾ ಸದಸ್ಯರು (ತಾಲ್ಲೂಕಿನ ಹೆಚ್ಚು ಭೌಗೋಳಿಕ ಸದಸ್ಯರನ್ನು ಪ್ರತಿನಿಧಿಸುವ) | - | ಅಧ್ಯಕ್ಷರು |
| 2) | ಸ್ಥಳೀಯ ವಿಧಾನಪರಿಷತ್ ಸದಸ್ಯರು | - | ಸದಸ್ಯರು |
| 3) | ತಹಶೀಲ್ದಾರ್ | - | ಸದಸ್ಯರು |
| 4) | ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್‌ನ ತಾಂತ್ರಿಕ ಉಪ ವಿಭಾಗ ಅಥವಾ ಲೋಕೋಪಯೋಗಿ ಉಪ ವಿಭಾಗ | - | ಸದಸ್ಯರು |
| 5) | ಅಧಿಕಾರೇತರ ಸದಸ್ಯರು (6) (ಈ ಸ್ಥಾನಗಳಲ್ಲಿ ಒಬ್ಬರು ಪರಿಶಿಷ್ಟ ಜಾತಿ ಮತ್ತು ಒಬ್ಬರು ಮಹಿಳೆ ಕಡ್ಡಾಯವಾಗಿ ಇರತಕ್ಕದ್ದು) | - | ಸದಸ್ಯರು |
| 6) | ತಾಲ್ಲೂಕಿನ ಸಾರ್ವಜನಿಕ ಆರೋಗ್ಯ ಕ್ಷೇತ್ರದಲ್ಲಿ ಪ್ರಮುಖವಾಗಿ ಕೆಲಸ ಮಾಡುತ್ತಿರುವ ಸರ್ಕಾರೇತರ ಸಂಸ್ಥೆಯ ಪ್ರತಿನಿಧಿ | - | ಸದಸ್ಯರು |
| 7) | ಆಡಳಿತಾಧಿಕಾರಿ, ತಾಲ್ಲೂಕು ಆಸ್ಪತ್ರೆ | - | ಸದಸ್ಯ ಕಾರ್ಯದರ್ಶಿ |

ಇನ್ನು ಉಳಿದಂತೆ ಸರ್ಕಾರಿ ಆದೇಶ ಸಂಖ್ಯೆ: ಆಕುಕ 445 ಆಯೋಸಂ 2002 ದಿ:22.8.2003 ರಲ್ಲಿನ ಮೆಮೊರಂಡಮ್ ಆಫ್ ಅಸೋಸಿಯೇಷನ್ ಮತ್ತು ಬೈಲಾಗಳ ಅನುಸೂಚಿಯಲ್ಲಿ ನಮೂದಿಸಿದ ಇತರ ಅಧಿಕಾರಿ ಸದಸ್ಯರುಗಳು ಈ ಸಮಿತಿಯ ಸದಸ್ಯರಾಗಿ ಮುಂದುವರೆಯುತ್ತದೆ. ಮತ್ತು ಮೆಮೊರಂಡಮ್ ಆಫ್ ಅಸೋಸಿಯೇಷನ್ ಮತ್ತು ಬೈಲಾಗಳ ಎಲ್ಲಾ ನಿಯಮಗಳು ಯಥಾಸ್ಥಿತಿ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಆರ್. ಶಂಕರ್**

ಪಿ.ಆರ್. 207

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ENERGY SECRETARIAT

**Sub:** Transfer of 2.5 MW Wind Power Capacity (Wind Mill Project) in favour of M/s Bhagyanagar India Limited (Phase-3)- reg.

**Read:** 1) Government order No: DE 26 NCE 1999 dated: 13.5.1999.

2) Government order No: EN 61 NCE 2005 dated: 13.4.1999.

3) Letter No. KRED/08/BIL(P-3)/2007/106 dated: 11.1.2007 received from the Managing Director, Karnataka Renewable Energy Development Limited, Bangalore.

**Preamble:**

In the Government Order dated: 13.4.2005 read at (2) above, sanction has been accorded for implementation of 55.0 MW capacity Wind Power Project (Wind Mill Project) at Gadag District to M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated 11.1.2007 read at (3) above, has recommended to the Government for transfer of 2.5 MW Wind Power capacity (Wind Mill Project) in favour of M/s Bhagyanagar India Limited (Phase-3) from out of sanctioned 55.00 MW Wind Power Capacity at Chaginakeri village, Mundargi Taluk, Gadag District to M/s Suzlon Energy Limited.

The proposal has been examined at the Government level and hence the following order:

**Government Order No: EN 11 NCE 2007, Bangalore, Dated: 20th January 2007**

Government accords approval for transfer of 2.5 MW Wind Power capacity (Wind Mill Project) in favour of M/s Bhagyanagar India Limited (Phase-3) from out of sanctioned 55.00 MW Wind Power Capacity (Wind Mill Project) allotted to M/s Suzlon Energy Limited at Chaginakeri village, Mundargi Taluk, Gadag District.

The terms and conditions of the Government Order read at (1) above, shall **IPSO FACTO** applicable.

By Order and in the name of the Governor of Karnataka,

**SURESH.B.KRISHNAPPANAVAR**

P.R. 208

Under Secretary to Government,

Energy Department.

## ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯ ಮೈಸೂರಿನಲ್ಲಿ ನಡೆಸುತ್ತಿರುವ ಹೆಲೆನ್ ಕೆಲರ್ ಅಂಧ ವಿದ್ಯಾರ್ಥಿಗಳ ವಿಶೇಷ ಶಿಕ್ಷಕರ ತರಬೇತಿ ಕೇಂದ್ರದಲ್ಲಿ ತರಬೇತಿ ಪಡೆಯುವ ಅಂಧ ಪ್ರಶಿಕ್ಷಣಾರ್ಥಿಗಳಿಗೆ ನ್ಯಾಷನಲ್ ಇನ್ಸ್ಟಿಟ್ಯೂಟ್ ಫಾರ್ ವಿಜುಯಲಿ ಹ್ಯಾಂಡಿಕ್ಯಾಪ್ಡ್ ಡೆಹರಾಡೂನ್ ಸಂಸ್ಥೆಯು ವಿಧಿಸಿರುವ ಭೋದನಾ ಶುಲ್ಕವನ್ನು ರಾಜ್ಯ ಸರ್ಕಾರದ ವತಿಯಿಂದ ಪಾವತಿಸಿ ಅವರಿಗೆ ಉಚಿತ ಊಟ ಮತ್ತು ವಸತಿ ಸೌಲಭ್ಯವನ್ನು ಒದಗಿಸುವ ಹೊಸ ಯೋಜನೆಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**

1) ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ: ಟಿಟಿಸಿವಿಹೆಚ್/02/2005-06/8686. ದಿ:25.10.2006 ದಿ:03.06.2006.
2) ದಿನಾಂಕ 17.6.2006ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆ.

**ಪ್ರಸ್ತಾವನೆ:**

ರಾಜ್ಯದಲ್ಲಿರುವ ಅಂಗವಿಕಲ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣ ನೀಡಿ ಅವರನ್ನೂ ಸಹ ದೇಶದ ಉತ್ತಮ ಪ್ರಜೆಗಳನ್ನು ಮಾಡುವ ನಿಟ್ಟಿನಲ್ಲಿ ರಾಜ್ಯ ಸರ್ಕಾರವು ಪ್ರಥಮ ಬಾರಿಗೆ ಮೈಸೂರಿನಲ್ಲಿ ನ್ಯಾಷನಲ್ ಇನ್ಸ್ಟಿಟ್ಯೂಟ್ ಫಾರ್ ವಿಜುಯಲಿ ಹ್ಯಾಂಡಿಕ್ಯಾಪ್ಡ್ ಡೆಹರಾಡೂನ್ ಸಂಸ್ಥೆಯ ಸಹಯೋಗದೊಂದಿಗೆ 2000-01ನೇ ಸಾಲಿನಲ್ಲಿ ಹೆಲನ್ ಕೆಲರ್ ಅಂಧ ವಿದ್ಯಾರ್ಥಿಗಳ ವಿಶೇಷ ಶಿಕ್ಷಕರ ತರಬೇತಿ ಕೇಂದ್ರವನ್ನು ಹಾಗೂ ಅಲಿಯವರ್ ಜಂಗ್ ನ್ಯಾಷನಲ್ ಇನ್ಸಿಟ್ಯೂಟ್ ಫಾರ್ ದಿ ಹಿಯರಿಂಗ್ ಹ್ಯಾಂಡಿಕ್ಯಾಪ್ಡ್ ಮುಂಬೈ ಸಂಸ್ಥೆಯ ಸಹಯೋಗದೊಂದಿಗೆ 2001-02ನೇ ಸಾಲಿನಲ್ಲಿ ಶ್ರವಣ ದೋಷವುಳ್ಳ ವಿದ್ಯಾರ್ಥಿಗಳ ವಿಶೇಷ ಶಿಕ್ಷಕರ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿದೆ.

ಆರಂಭದಲ್ಲಿ ಈ ತರಬೇತಿಯು ಒಂದು ವರ್ಷದ ತರಬೇತಿಯಾಗಿದ್ದು, 2004-05ನೇ ಸಾಲಿನಿಂದ ಎರಡು ವರ್ಷಗಳ ತರಬೇತಿಗಳನ್ನಾಗಿ ಮಾರ್ಪಡಿಸಲಾಗಿದೆ. 2003-04ನೇ ಸಾಲಿನವರೆಗೆ ಈ ಶಿಕ್ಷಣವನ್ನು ಉಚಿತವಾಗಿ ನೀಡಲಾಗುತ್ತಿದ್ದು 2004-05ನೇ ಸಾಲಿನಿಂದ ಅನ್ವಯವಾಗುವಂತೆ ಹೆಲನ್ ಕೆಲರ್ ಅಂಧ ವಿದ್ಯಾರ್ಥಿಗಳ ವಿಶೇಷ ಶಿಕ್ಷಕರ ತರಬೇತಿ ಕೇಂದ್ರದಲ್ಲಿ ತರಬೇತಿ ಪಡೆಯುವ ಪ್ರತಿ ಪ್ರಶಿಕ್ಷಣಾರ್ಥಿಗಳಿಂದ ವಾರ್ಷಿಕ ರೂ.5000/- ಭೋಧನಾ ಶುಲ್ಕವನ್ನು ಪಡೆಯುವಂತೆ ನ್ಯಾಷನಲ್ ಇನ್ಸಿಟ್ಯೂಟ್ ಫಾರ್ ವಿಜುಯಲಿ ಹ್ಯಾಂಡಿಕ್ಯಾಪ್ಡ್ ಡೆಹರಾಡೂನ್ ಸಂಸ್ಥೆಯು ಆದೇಶ ನೀಡಿದ್ದು ಎನ್.ಐ.ವಿ.ಹೆಚ್. ಸಂಸ್ಥೆಯ ಆದೇಶದಂತೆ ಬೋಧನಾ ಶುಲ್ಕವನ್ನು ಪಾವತಿಸುವಂತೆ ಪ್ರಶಿಕ್ಷಣಾರ್ಥಿಗಳಿಗೆ ತಿಳಿಸಲಾಗಿತ್ತು.

ಆದರೆ ಬೋಧನಾ ಶುಲ್ಕವನ್ನು ಪಾವತಿಸಲು ಸಾಧ್ಯವಿಲ್ಲವೆಂದು ಅಂಧ ಪ್ರಶಿಕ್ಷಣಾರ್ಥಿಗಳು ಮುಷ್ಕರ ನಡೆಸಿದ ಹಿನ್ನೆಲೆಯಲ್ಲಿ ಬೋಧನಾ ಶುಲ್ಕವನ್ನು ಮನ್ನಾ ಮಾಡುವಂತೆ ಕೋರಿ, NIVH ಸಂಸ್ಥೆಗೆ ಮನವಿ ಸಲ್ಲಿಸಲಾಗಿದ್ದು, ಈ ಮನವಿಯನ್ನು ಪರಿಗಣಿಸಿದ NIVH ಸಂಸ್ಥೆಯು ಈ ನಿಯಮವು ದೇಶದ ಎಲ್ಲಾ ಅಂಧ ವಿದ್ಯಾರ್ಥಿಗಳಿಗೆ ಬೋಧಿಸುವ ವಿಶೇಷ ಶಿಕ್ಷಕರ ತರಬೇತಿ ಕೇಂದ್ರಗಳಿಗೆ ಅನ್ವಯವಾಗುವುದರಿಂದ ಯಾವುದೇ ಕಾರಣಕ್ಕೂ ಬೋಧನಾ ಶುಲ್ಕವನ್ನು ಮನ್ನಾ ಮಾಡಲು ಸಾಧ್ಯವಿಲ್ಲವೆಂದು ಸ್ಪಷ್ಟಪಡಿಸಿದೆ.

ಈ ವಿಷಯವನ್ನು ಅರಿತ ತರಬೇತಿ ಕೇಂದ್ರದ ಅಂಧ ಪ್ರಶಿಕ್ಷಣಾರ್ಥಿಗಳು ಬೋಧನಾ ಶುಲ್ಕವನ್ನು ಪಾವತಿಸಲು ಅಶಕ್ತರಾಗಿರುವುದಾಗಿ ತಿಳಿಸಿ ಬೋಧನಾ ಶುಲ್ಕ ಮನ್ನಾ ಮಾಡುವುದರ ಜೊತೆಗೆ ರಾಜ್ಯದ ವಿವಿಧ ಭಾಗಗಳಿಂದ ಬಂದು ಸರಿಯಾದ ಊಟದ ಮತ್ತು ವಸತಿ ವ್ಯವಸ್ಥೆಯಿಲ್ಲದೆ ಅಂಧರು ತರಬೇತಿ ಪಡೆಯಲು ಸಾಧ್ಯವಿಲ್ಲವೆಂದು ಹಲವಾರು ಬೇಡಿಕೆಗಳನ್ನು ಅಂಧ ಪ್ರಶಿಕ್ಷಣಾರ್ಥಿಗಳು ಸರ್ಕಾರದ ಮುಂದಿಟ್ಟಿರುತ್ತಾರೆ.

ಪ್ರತಿವರ್ಷ ತಲಾ ತರಗತಿಗಳಲ್ಲಿ ಸುಮಾರು 20 ಪ್ರಶಿಕ್ಷಣಾರ್ಥಿಗಳು ವಿಶೇಷ ತರಬೇತಿ ಪಡೆದು ರಾಜ್ಯದಲ್ಲಿನ ಅಂಗವಿಕಲ ಮಕ್ಕಳಿಗೆ ಬೋದಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಕಳೆದ ಎರಡು ವರ್ಷಗಳಿಂದ ಅಂಧ ಪ್ರಶಿಕ್ಷಣಾರ್ಥಿಗಳಿಗೆ ಮಾತ್ರ ಬೋಧನಾ ಶುಲ್ಕವನ್ನು ಮನ್ನಾ ಮಾಡಿ ಇವರಿಗೆ ಉಚಿತ ಊಟ ಮತ್ತು ವಸತಿ ಸೌಕರ್ಯವನ್ನು ಒದಗಿಸುವ ನಿಟ್ಟಿನಲ್ಲಿ ಇದೊಂದು ವಿಶೇಷ ಪ್ರಕರಣವೆಂದು ಸರ್ಕಾರದಿಂದ ಮಂಜೂರಾತಿ ನೀಡಿ ಈ ಸೌಲಭ್ಯವನ್ನು ಒದಗಿಸಲಾಗಿದೆ.

ತರಬೇತಿ ಕೇಂದ್ರದಲ್ಲಿನ ಪ್ರಶಿಕ್ಷಣಾರ್ಥಿಗಳು ಅತ್ಯಂತ ಬಡ ಕುಟುಂಬ ವರ್ಗಗಳಿಗೆ ಸೇರಿದವರಾಗಿದ್ದು ಇವರಿಗೆ, ಬೋಧನಾ ಶುಲ್ಕ ಪಾವತಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಹಾಗೂ ಇದೊಂದು ನಿರಂತರ ಸಮಸ್ಯೆಯಾಗಿರುವುದರಿಂದ ಇದನ್ನು ಬಗೆಹರಿಸಲು ಇಲಾಖೆಯು ಇದೊಂದು ಹೊಸ ಯೋಜನೆಯಾಗಿ ಅನುಷ್ಠಾನಗೊಳಿಸಲು ನಿರ್ಣಯಿಸಿದ ಮೇರೆಗೆ ನಿರ್ದೇಶಕರು ಅಂಗವಿಕಲರ ಕಲ್ಯಾಣ ಇಲಾಖೆ ಇವರು ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಪತ್ರದೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿ ಸದರಿ ಪ್ರಸ್ತಾವನೆಗೆ ಸರ್ಕಾರದ ಅನುಮತಿಯನ್ನು ನೀಡಬೇಕೆಂದು ಕೋರಿದಾರೆ.

ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ:ಮಮಇ:145:ಪಿಹೆಚ್‌ಪಿ:2006(4), ಬೆಂಗಳೂರು, ದಿನಾಂಕ: 24ನೇ ಜನವರಿ 2007**

ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ಇಲಾಖೆಯು ಮೈಸೂರಿನಲ್ಲಿ ನಡೆಸುತ್ತಿರುವ ಹೆಲೆನ್ ಕೆಲರ್ ಅಂಧ ವಿದ್ಯಾರ್ಥಿಗಳ ವಿಶೇಷ ಶಿಕ್ಷಕರ ತರಬೇತಿ ಕೇಂದ್ರದಲ್ಲಿ ತರಬೇತಿ ಪಡೆಯುವ ಅಂಧ ಪ್ರಶಿಕ್ಷಣಾರ್ಥಿಗಳಿಗೆ ನ್ಯಾಷನಲ್ ಇನ್ಸ್ಟಿಟ್ಯೂಟ್ ಫಾರ್ ವಿಜುಯಲಿ ಹ್ಯಾಂಡಿಕ್ಯಾಪ್ಡ್ ಡೆಹರಾಡೂನ್ ಸಂಸ್ಥೆಯು ವಿಧಿಸಿರುವ ಬೋಧನಾ ಶುಲ್ಕವನ್ನು ಸರ್ಕಾರದ ವತಿಯಿಂದ ಪಾವತಿಸಲು ಹಾಗೂ ವರಿಗೆ ಉಚಿತ ಊಟ ಮತ್ತು ವಸತಿ ಸೌಲಭ್ಯವನ್ನು ವಾರ್ಷಿಕ ರೂ. 2.00 ಲಕ್ಷಗಳ ವೆಚ್ಚದಲ್ಲಿ ಒದಗಿಸಲು ಆಡಳಿತಾತ್ಮಕ ಅನುಮೋದನೆ ನೀಡಿದೆ. ರೂ.2.00 ಲಕ್ಷಗಳನ್ನು (ರೂಪಾಯಿ ಎರಡು ಲಕ್ಷಗಳು ಮಾತ್ರ) ಈ ಕೆಳಕಂಡ ಬಾಬ್ತುಗಳಿಗೆ ಖರ್ಚು ಮಾಡಬಹುದಾಗಿದೆ.

| | | | |
|---|---|---|---|
| ಅ. | ಬೋಧನಾ ಶುಲ್ಕ 1 | 1 ಅಭ್ಯರ್ಥಿಗಳಿಗೆ ರೂ.5000/-ಗಳಂತೆ 20 ದೃಷ್ಟಿದೋಷವುಳ್ಳ ಪ್ರಶಿಕ್ಷಣಾರ್ಥಿಗಳಿಗೆ | ರೂ.100000/- |
| ಆ | ಊಟ ಮತ್ತು ವಸತಿ | 1 ಅಭ್ಯರ್ಥಿಗಳಿಗೆ ರೂ. 400 ರಂತೆ 20 ಅಭ್ಯಥಿಗಳಿಗೆ 10 ತಿಂಗಳಿಗೆ | ರೂ. 96000/- |
| ಇ | ಇತರೆ | | ರೂ. 4000/- |
| | | **ಒಟ್ಟು** | **ರೂ. 200000/-** |

ಇದಕ್ಕೆ ಸಂಬಂಧಿಸಿ ಲೆಕ್ಕಶೀರ್ಷಿಕೆ 2235-02-01-0-05 (ಯೋಜನೇತರ) ಉಪ ಲೆಕ್ಕ ಶೀರ್ಷಿಕೆ 221 ಸಾಮಾಗ್ರಿ ಸರಬರಾಜು ಇದರಡಿಯಲ್ಲಿ ಲಭ್ಯವಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 17.6.2006 ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಯ ಅನುಮೋದನೆಯಂತೆ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:FD:488:EXP-3:2006, ದಿನಾಂಕ: 18.12.2006ಲ್ಲಿ ನೀಡಿರುವ ಸಹಮತಿ ಪ್ರಕಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಂ. ಚಂದ್ರಮ್ಮ**

ಪಿ.ಆರ್. 209

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** M/s Abletech Electro Engineers(P) Limited ಕಂಪನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕೆಳಸಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಕೆಳಸಿ/2005/185 ದಿನಾಂಕ:20.12.2006.

2. ದಿನಾಂಕ: 3.8.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Abletech Electro Engineers(P) Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಕೆಳಸಿ ಗ್ರಾಮದ ಬಳಿ ಬೆಡ್ತಿ ಹೊಳೆಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕೆಳಸಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 2 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರದ ಆದೇಶ ಸಂಖ್ಯೆ: ಇಎನ್ 53 ಎನ್‌ಸಿಇ 2006, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2006**

M/s Abletech Electro Engineers(P) Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಕೆಳಸಿ ಗ್ರಾಮದ ಬಳಿ ಬೆಡ್ತಿ ಹೊಳೆಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕೆಳಸಿ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು ಎಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

   (ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನರೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 210

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**ವಿಷಯ:** M/s Mysore Mercantile Co Ltd. ಕಂಪನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದುಗ್ಗನಬೈಲು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಪನಸಗುಳಿ/2005/690 ದಿನಾಂಕ:16.3.2006.

2. ದಿನಾಂಕ: 3.8.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Mysore Mercantile Co Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ದುಗ್ಗನಬೈಲು ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದುಗ್ಗನಬೈಲು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 9 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರದ ಆದೇಶ ಸಂಖ್ಯೆ: ಇಎನ್ 158 ಎನ್‌ಸಿಇ 2006, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2006**

M/s Mysore Mercantile Co Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ದುಗ್ಗನಬೈಲು ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದುಗ್ಗನಬೈಲು ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು ಎಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನರೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಶಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಶಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 211

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

**ವಿಷಯ:** M/s Mysore Mercantile Co Ltd. ಕಂಪನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪನಸಗೋಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಪನಸಗುಳಿ/2005/689 ದಿನಾಂಕ:16.3.2006.

2. ದಿನಾಂಕ: 3.8.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Mysore Mercantile Co Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಪನಸಗೋಳಿ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪನಸಗೋಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 8 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರದ ಆದೇಶ ಸಂಖ್ಯೆ: ಇಎನ್ 159 ಎನ್‌ಸಿಇ 2006, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2006**

M/s Mysore Mercantile Co Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಪನಸಗೋಳಿ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪನಸಗೋಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು ಎಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನರೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 212

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** M/s Mysore Mercantile Co Ltd. ಕಂಪನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈರೆಕೊಪ್ಪ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ಬೈರೆಕೊಪ್ಪ/2005/688 ದಿನಾಂಕ:16.3.2006.

2. ದಿನಾಂಕ: 3.8.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Mysore Mercantile Co Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಬೈರೆಕೊಪ್ಪ ಗ್ರಾಮದ ಹೆಬ್ಬುಳು ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈರೆಕೊಪ್ಪ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 10 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರದ ಆದೇಶ ಸಂಖ್ಯೆ: ಇಎನ್ 160 ಎನ್‌ಸಿಇ 2006, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2006**

M/s Mysore Mercantile Co Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಬೈರೆಕೊಪ್ಪ ಗ್ರಾಮದ ಹೆಬ್ಬುಳು ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಬೈರೆಕೊಪ್ಪ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು ಎಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

   (ಆ) ಅಂತಹ ಒಡಂಬಡಿಕೆನ್ನು ರೂ.400.00ರ ಛಾಪಾ ಕಾಗದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

   (ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

   (ಆ) ಹಂಚಿಕೆದಾರರು ಕರ್ನಾಟಕ ನರೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ದಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 213 **ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

**ವಿಷಯ:** M/s Mysore Mercantile Co Ltd. ಕಂಪನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಕಂಬಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ಗಂಗವಳ್ಳಿ/2005/743 ದಿನಾಂಕ:16.3.2006.
2. ದಿನಾಂಕ: 3.8.2006 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Mysore Mercantile Co Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಯಲ್ಲಾಪುರ ತಾಲ್ಲೂಕಿನ ಹೊಸಕಂಬಿ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಸಕಂಬಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹಂಚಿಕೆ ಸಮಿತಿ ಸಭೆ ನಡವಳಿಯಲ್ಲಿ ಕಿರು ಜಲ ವಿದ್ಯುತ್ ಯೋಜನೆ ಹಂಚಿಕೆ ಪಟ್ಟಿಯ ಕ್ರಮ ಸಂಖ್ಯೆ: 7 ರಲ್ಲಿ ಶಿಫಾರಸಿಸ್ಸಿದ್ದರನ್ವಯ ಕೂಲಂಕಷವಾಗಿ ಪರಿಶೀಲಿಸಿದ್ದು ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರದ ಆದೇಶ ಸಂಖ್ಯೆ: ಇಎನ್ 175 ಎನ್ಸಿಇ 2006, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್ 2006**

M/s Mysore Mercantile Co Limited ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲ ತಾಲ್ಲೂಕಿನ ಹೊಸಕಂಬಿ ಗ್ರಾಮದ ಬಳಿ ಗಂಗವಳ್ಳಿ ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ದುಗ್ಗನಬೈಲು ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಅನುಮತಿ ಪಡೆಯಬೇಕೆಂದು ಹಾಗೂ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು ಎಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

   (ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

   (ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ದಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

   (ಆ) ಹಂಚಿಕೆದಾರರು ಕರ್ನಾಟಕ ನರೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಅವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ದಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 214 **ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಸಿಆಸುಇ 22 ಸೇಸವಿ 2006, ಬೆಂಗಳೂರು, ದಿನಾಂಕ: 5ನೇ ಜನವರಿ 2007**

**ವಿಷಯ:** ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಸದಸ್ಯತ್ವ ಶುಲ್ಕ ಪಾಘವತಿ ಮಾಡುವ ಸಂಬಂಧವಾಗಿ ಹೊರಡಿಸಿರುವ ಸುತ್ತೋಲೆಯನ್ನು ಮಾರ್ಪಡಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಸವಿ 93, ದಿನಾಂಕ: 24.12.1993.

2. ಸುತ್ತೋಲೆ ಸಂಖ್ಯೆ: ಸಿಆಸುಇ 19 ಸೇಸವಿ 2005, ದಿನಾಂಕ: 16.11.2005.

3. ದಿನಾಂಕ 16.11.2006ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಪತ್ರ ಸಂಖ್ಯೆ: ಜೀಇಎ: 3325:2006-07.

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಸದಸ್ಯತ್ವ ಶುಲ್ಕವನ್ನು ಪಾವತಿ ಮಾಡುವ ಸಂಬಂಧವಾಗಿ ಉಲ್ಲೇಖ (1) ರಲ್ಲಿರುವ ದಿನಾಂಕ: 24.12.1993ರ ಆದೇಶದಲ್ಲಿ ಸೂಚನೆಗಳನ್ನು ನೀಡಲಾಗಿದೆ. ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಸದಸ್ಯತ್ವ ಶುಲ್ಕ ಪರಿಷ್ಕೃತವಾದ ಹಿನ್ನೆಲೆಯಲ್ಲಿ ಸದಸ್ಯತ್ವ ಶುಲ್ಕವನ್ನು ನೌಕರರ ವೇತನದಿಂದ ಕಡಿತಗೊಳಿಸಿ ಸಂಘಕ್ಕೆ ಪಾವತಿಸುವ ಸಂಬಂಧವಾಗಿ ಉಲ್ಲೇಖ (2) ರಲ್ಲಿರುವ ದಿನಾಂಕ: 16.11.2005ರ ಸುತ್ತೋಲೆಯಲ್ಲಿ ಸೂಚನೆಗಳನ್ನು ನೀಡಲಾಗಿದೆ. ಉಲ್ಲೇಖ (1) ರಲ್ಲಿರುವ ದಿನಾಂಕ: 24.12.1993ರ ಆದೇಶದ ಕಂಡಿಕೆ (ಬಿ) ರಲ್ಲಿ ನೌಕರರು ಸಮ್ಮತಿ ಅಥವಾ ಅಸಮ್ಮತಿ ಸೂಚಿಸದಿದ್ದಲ್ಲಿ ಅಂತಹ ನೌಕರರ ಸದಸ್ಯತ್ವ ಶುಲ್ಕವನ್ನು ಕಡಿತಗೊಳಿಸಲು ಒಪ್ಪಿಗೆ ಇದೆ ಎಂದು ಪರಿಗಣಿಸುವಂತೆ ಸೂಚಿಸಲಾಗಿರುವುರಿಂದ, ಆ ಸೂಚನೆಯನ್ನು ಉಲ್ಲೇಖ (2) ರಲ್ಲಿರುವ ದಿನಾಂಕ: 16.11.2005ರ ಸುತ್ತೋಲೆಯಲ್ಲಿನ ಕಂಡಿಕೆ 4 ರಲ್ಲಿ ಅಳವಡಿಸಿ ಮಾರ್ಪಾಡು ಆದೇಶ ಹೊರಡಿಸುವಂತೆ ಉಲ್ಲೇಖ (3)ರಲ್ಲಿರುವ ದಿನಾಂಕ: 16.11.2006ರ ಪತ್ರದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘವು ಕೋರಿರುತ್ತದೆ. ಸಂಘದ ಮನವಿಯನ್ನು ಪರಿಶೀಲಿಸಲಾಗಿದೆ.

ಮೇಲ್ಕಂಡ ಹಿನ್ನೆಲೆಯಲ್ಲಿ ಉಲ್ಲೇಖ (2) ರಲ್ಲಿರುವ ದಿನಾಂಕ: 16.11.2005ರ ಸುತ್ತೋಲೆಯಲ್ಲಿನ ಕಂಡಿಕೆ 4ನ್ನು ಈ ಕೆಳಕಂಡಂತೆ ಮಾರ್ಪಡಿಸಲಾಗಿದೆ.

"4. ಪ್ರತಿಯೊಬ್ಬ ನೌಕರನಿಂದ ಸಂಘದ ವಾರ್ಷಿಕ ವಂತಿಗೆಗೆ ಸಂಬಳದಿಂದ ಕಡಿತಗೊಳಿಸಲು ಸಮ್ಮತಿ ಪತ್ರ ಪಡೆದು ದಾಖಲೆಯಲ್ಲಿ ಇರಿಸುವುದು. ಈ ರೀತಿ ಸಮ್ಮತಿ ಪತ್ರವನ್ನು ಪ್ರಸ್ತುತ ವರ್ಷದಲ್ಲಿ ಕೂಡಲೇ ಪಡೆಯಬಹುದಾಗಿದೆ. ಮತ್ತು ಮುಂದಿನ ವರ್ಷಗಳಲ್ಲಿ ನವೆಂಬರ್/ಡಿಸೆಂಬರ್ ತಿಂಗಳುಗಳಲ್ಲಿ ಪಡೆಯಬಹುದಾಗಿದೆ. ನಿಗದಿತ ಅವಧಿಯಲ್ಲಿ ಸಮ್ಮತಿ ಪತ್ರವನ್ನು ನೀಡುವ ಜವಾಬ್ದಾರಿ ನೌಕರರ ಮೇಲಿರುತ್ತದೆ. ನಿಗದಿತ ಅವಧಿಯಲ್ಲಿ ಸವ್ಮತಿಯನ್ನು ವ್ಯಕ್ತಪಡಿಸದೇ ಇದ್ದಲ್ಲಿ ಅಂತಹ ವ್ಯಕ್ತಿಗಳ ಸಮ್ಮತಿ ಇದೆಯೆಂದು ಭಾವಿಸಿ ಅವರ ವೇತನದಿಂದ ಸದಸ್ಯತ್ವ ಶುಲ್ಕವನ್ನು ಕಡಿತಗೊಳಿಸಬಹುದು."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವರಾಜು**

ಪಿ.ಆರ್. 215

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವಾ ನಿಯಮಗಳು-1).

## ಕಂದಾಯ ಸಚಿವಾಲಯ

**ವಿಷಯ:** ರಾಜ್ಯದ ಅಭಾವ ಪರಿಸ್ಥಿತಿಯಲ್ಲಿ ಅಂತರರಾಜ್ಯ ಮೇವು ಸಾಗಾಣಿಕೆಯನ್ನು ನಿರ್ಬಂಧಿಸುವ ಬಗ್ಗೆ.

**ಓದಲಾಗಿದೆ:** 1) ಆಯುಕ್ತರು, ಪಶುಸಂಗೋಪನೆ ಮತ್ತು ಪಶುವೈದ್ಯ ಸೇವೆಗಳು ಇವರ ಅ.ಸ.ಪತ್ರ ಸಂಖ್ಯೆ: ವೇವು:ಬರಗಾಲ:ವಿವ-6: 2006-07 ಭಾಗ-3 ದಿ:11.1.2007.

2) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ ಇವರ ಅ.ಸ.ಪತ್ರ ಸಂಖ್ಯೆ: ಪಸಂಮೀ 8 ಪಪಾಯೋ 2007 ದಿ: 12.1.2007.

3) ಜಿಲ್ಲಾಧಿಕಾರಿ ಮೈಸೂರು ಇವರ ಪತ್ರ ಸಂಖ್ಯೆ:ಸಿಎಎಲ್/47/2006-07 ದಿನಾಂಕ: 4.1.2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1),(2) ಮತ್ತು (3)ರ ಪತ್ರಗಳಲ್ಲಿ ಆಯುಕ್ತರು, ಪಶುಸಂಗೋಪನಾ ಇಲಾಖೆ, ಸರ್ಕಾರದ ಪ್ರದಾನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮಿನುಗಾರಿಕೆ ಇಲಾಖೆ ಹಾಗೂ ಜಿಲ್ಲಾಧಿಕಾರಿ, ಮೈಸೂರು ಇವರು ರಾಜ್ಯದಲ್ಲಿ ಮೇವಿನ ಅಭಾವವಿರುವುದರಿಂದ ಹೊರರಾಜ್ಯಗಳಿಗೆ ಮೇವು ಸಾಗಾಣಿಕೆ ಮಾಡುವುದನ್ನು ನಿರ್ಬಂಧಿಸಲು ಜಿಲ್ಲಾಧಿಕಾರಿಗಳಿಗೆ ಸೂಕ್ತ ಆದೇಶ ನೀಡುವಂತೆ ಕೋರಿದ್ದಾರೆ.

ರಾಜ್ಯದಲ್ಲಿ 128 ತಾಲ್ಲೂಕುಗಳನ್ನು ಬರಪೀಡಿತವೆಂದು ಘೋಷಿಸಿದ್ದು, ಮಳೆಯ ಕೊರತೆಯಿಂದ ಈಗಾಗಲೇ ಚಿತ್ರದುರ್ಗ, ಕೊಪ್ಪಳ, ತುಮಕೂರು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಮೇವಿನ ಕೊರತೆ ಉಂಟಾಗಿರುವುದು ಕಂಡು ಬಂದಿರುತ್ತದೆ. ರಾಜ್ಯದ ಗಡಿ ಜಿಲ್ಲೆಗಳಲ್ಲಿ ಮೇವು ಲಭ್ಯವಿದ್ದು, ಈ ಮೇವನ್ನು ಹೊರರಾಜ್ಯಗಳಾದ ಕೇರಳ, ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ ರಾಜ್ಯಗಳಿಗೆ ಸಾಗಿಸುತ್ತಿರುವುದು ಗಮನಕ್ಕೆ ಬಂದಿದೆ ಎಂದು ಪಶುಸಂಗೋಪನಾ ಇಲಾಖೆ ವರದಿ ಮಾಡಿರುತ್ತಾರೆ. ರಾಜ್ಯದಲ್ಲಿನ ಮೇವನ್ನು ಜಾನುವಾರುಗಳ ಉಪಯೋಗಕ್ಕಾಗಿ ಉಳಿಸಿಕೊಳ್ಳುವುದು ಅವಶ್ಯಕವಾಗಿರುವುದರಿಂದ ಹೊರರಾಜ್ಯಗಳ ಮೇವು ಸಾಗಾಣಿಕೆಯನ್ನು ಜೂನ್ 2007ರ ವರೆಗೆ ನಿರ್ಬಂಧಿಸಲು ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 4 ಟಿಎಸ್‌ವೈ 2007, ದಿನಾಂಕ: 22ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ರಾಜ್ಯದಲ್ಲಿನ ಅಭಾವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಅಂತರರಾಜ್ಯ ಮೇವು ಸಾಗಾಣಿಕೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ಜೂನ್ 2007 ರವರೆಗೆ ನಿರ್ಬಂಧಿಸಿದೆ.

ರಾಜ್ಯದ ಎಲ್ಲಾ ಚೆಕ್ ಪೋಸ್ಟ್‌ಗಳಿಂದ ಮೇವು ಹೊರರಾಜ್ಯಕ್ಕೆ ಹೋಗದಂತೆ ಹಾಗೂ ಒಣಮೇವನ್ನು ಯಾವುದೇ ರೂಪದಲ್ಲಿ ಸಂಸ್ಕರಿಸಿ ಸಾಗಾಣಿಕೆ ಮಾಡುವುದನ್ನು ನಿಷೇಧಿಸಿದೆ. ಈ ಸಂಬಂಧ ಅವಶ್ಯವಿರುವ ಕ್ರಮಗಳನ್ನು ಕೈಗೊಳ್ಳುವಂತೆ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ದೇಸಾಯಿ**

ಪಿ.ಆರ್. 217

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ)

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಎರಡು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ:ರಸಾ: ಮೇಲ್ದರ್ಜೆ:ಮಂಡ್ಯ:ಸಇಂ5:8:2006-07, ದಿನಾಂಕ: 23.12.2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಎರಡು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ. ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ನಾಗಮಂಗಲ-ಶ್ರವಣಬೆಳಗೊಳ ರಸ್ತೆಯ ಮಾಯಿಗೋನಹಳ್ಳಿ ಗೇಟ್ ನಿಂದ ಪಿ.ನೇರಲಕೆರೆ-ಮಲ್ಲಸಂದ್ರ ಮಾರ್ಗವಾಗಿ ಸುಖಧರೆ ಬಳಿ ಕೆ.ಟಿ.ಡಿ. ರಸ್ತೆಯನ್ನು ಸೇರುವ ರಸ್ತೆ | 10.00 |
| 2. | ನಾಗಮಂಗಲ-ಪಡುವಲಪಟ್ಟಣ ಗಂಗಸಮುದ್ರ ರಸ್ತೆಯ ಕಿಮೀ 0.300 ರಿಂದ ರಾಜ್ಯ ಹೆದ್ದಾರಿ 19ರ ಮಾದಪ್ಪಗೌಡ ವೃತ್ತ ಸೇರುವ ರಸ್ತೆ. | 0.30 |
| | **ಒಟ್ಟು** | **10.30** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 34 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 23ನೇ ಜನವರಿ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಎರಡು ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 1. | ನಾಗಮಂಗಲ-ಶ್ರವಣಬೆಳಗೊಳ ರಸ್ತೆಯ ಮಾಯಿಗೋನಹಳ್ಳಿ ಗೇಟ್ ನಿಂದ ಪಿ.ನೇರಲಕೆರೆ-ಮಲ್ಲಸಂದ್ರ ಮಾರ್ಗವಾಗಿ ಸುಖಧರೆ ಬಳಿ ಕೆ.ಟಿ.ಡಿ. ರಸ್ತೆಯನ್ನು ಸೇರುವ ರಸ್ತೆ | 10.00 |
| 2. | ನಾಗಮಂಗಲ-ಪಡುವಲಪಟ್ಟಣ ಗಂಗಸಮುದ್ರ ರಸ್ತೆಯ ಕಿಮೀ 0.300 ರಿಂದ ರಾಜ್ಯ ಹೆದ್ದಾರಿ 19ರ ಮಾದಪ್ಪಗೌಡ ವೃತ್ತ ಸೇರುವ ರಸ್ತೆ. | 0.30 |
| | **ಒಟ್ಟು** | **10.30** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 218

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಿಷಯ:** ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು, ತರೀಕೆರೆ, ಮೂಡಿಗೆರೆ ಹಾಗೂ ಕೊಪ್ಪ ತಾಲ್ಲೂಕುಗಳ ವಿಧಾನ ಸಭಾ ಕ್ಷೇತ್ರದಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ: ಸಂಕದ:ರಶಾ: ಸಇಂ7:ಚಿಕ್ಕಮಗಳೂರು: 2006-07, ದಿನಾಂಕ: 14.12.2006.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಚಿಕ್ಕಮಗಳೂರು ಜಿಲ್ಲೆಯ ಚಿಕ್ಕಮಗಳೂರು, ತರೀಕೆರೆ, ಮೂಡಿಗೆರೆ ಹಾಗೂ ಕೊಪ್ಪ ತಾಲ್ಲೂಕುಗಳು ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಯು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರು ಓಡಾಡಲು ತುಂಬಾ ತೊಂದರೆಯಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| | **ತರೀಕೆರೆ ತಾಲ್ಲೂಕು:** | |
| 1. | ಎನ್.ಹೆಚ್. 206 ರಿಂದ ಎಂ.ಸಿ. ಹಳ್ಳಿ ಕೆಂಚಿಕೊಪ್ಪ ಮೂಲಕ ಟಿ.ಎಂ. ರಸ್ತೆಗೆ ಸೇರುವ ರಸ್ತೆ ಸಿದ್ಲೀಪುರ ಮೂಲಕ, ಗಂಗೂರು ಸೇರುವ ರಸ್ತೆ. | 6.00 |

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| 2. | ಬೀರೂರು ಲಿಂಗದಹಳ್ಳಿ ರಸ್ತೆಯಿಂದ ಯರದಂಕಲು ಮೂಲಕ ಬಿ.ಬಿ. ರಸ್ತೆ ಸೇರುವ ರಸ್ತೆ. | 4.00 |
| 3. | ಬಿ.ಬಿ. ರಸ್ತೆಯಿಂದ ಹುಲಿತಿಮ್ಮಾಂಪುರ ಮೂಲಕ ಕೆಂಚಾಪುರಕ್ಕೆ ಹೋಗುವ ರಸ್ತೆ | 3.00 |
| 4. | ಬಿ.ಬಿ. ರಸ್ತೆಯಿಂದ ಉಡೇನಾ ರಸ್ತೆ | 2.50 |
| 5. | ಬಿ.ಬಿ. ರಸ್ತೆಯಿಂದ ಸಂತವೇರಿ ರಸ್ತೆ | 1.00 |
| 6. | ಬಿ.ಬಿ. ಹಿಲ್ ರಸ್ತೆಯಿಂದ ಗಂಗೂರು ಮೇಟೂರು ಮುಖಾಂತರ ಬಿ.ಬಿ. ರಸ್ತೆ ಸೇರುವ ರಸ್ತೆ. | 6.00 |
| 7. | ಕೆ.ಎಲ್. ರಸ್ತೆಯಿಂದ ತಣಿಗೆ ಬೈಲು ಸೇರುವ ರಸ್ತೆ | 3.00 |
| 8. | ಬಿ.ಬಿ. ರಸ್ತೆಯಿಂದ ದೋರನಾಳು, ಸುಣ್ಣದಹಳ್ಳಿ, ನಂದಿಹೊಸಳ್ಳಿ ರಸ್ತೆ | 10.00 |
| 9. | ಕೆಂಚಾಪುರದಿಂದ ಗುಳ್ಳದಮನೆ ಕೆಂಚನಹಳ್ಳಿ ರಸ್ತೆ | 3.00 |
| | **ಒಟ್ಟು** | |
| | **ಚಿಕ್ಕಮಗಳೂರು ತಾಲ್ಲೂಕು:** | |
| 1. | ಗುಡ್ಡುದೂರು-ಕಠಾರದಳ್ಳಿ-ಹೊಸಳ್ಳಿ ರಸ್ತೆ | 9.00 |
| 2. | ಆಲದಗುಡ್ಡೆ-ಬಸ್ಕಲ್ ರಸ್ತೆ | 16.50 |
| 3. | ಮಲ್ಲಂದೂರು-ಹೊಲದಗದ್ದೆ-ಕಲ್ಮರಡಿಮಠ ರಸ್ತೆ | 10.00 |
| | **ಒಟ್ಟು** | |
| | **ಮೂಡಿಗೆರೆ ತಾಲ್ಲೂಕು:** | |
| 1. | ಮೂಡಿಗೆರೆ-ತತ್ಕೊಳ-ಕುಂದೂರು ರಸ್ತೆ | 16.00 |
| | **ಕೊಪ್ಪ ತಾಲ್ಲೂಕು:** | |
| 1. | ಕಚಿಗೆ-ಮೇಗೂರು-ಜೈನ ಬಸದಿ- ಕೊಗ್ರೆ ರಸ್ತೆ | 19.90 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 37 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 24ನೇ ಜನವರಿ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರ. ಸಂ. | ರಸ್ತೆಯ ವಿವರಗಳು | ಉದ್ದ (ಕಿ. ಮೀ) |
|---|---|---|
| | **ತರೀಕೆರೆ ತಾಲ್ಲೂಕು:** | |
| 1. | ಎನ್.ಹೆಚ್. 206 ರಿಂದ ಎಂ.ಸಿ. ಹಳ್ಳಿ ಕೆಂಚಿಕೊಪ್ಪ ಮೂಲಕ ಟಿ.ಎಂ. ರಸ್ತೆಗೆ ಸೇರುವ ರಸ್ತೆ ಸಿದ್ಲೀಪುರ ಮೂಲಕ, ಗಂಗೂರು ಸೇರುವ ರಸ್ತೆ. | 6.00 |
| 2. | ಬೀರೂರು ಲಿಂಗದಹಳ್ಳಿ ರಸ್ತೆಯಿಂದ ಯರದಂಕಲು ಮೂಲಕ ಬಿ.ಬಿ. ರಸ್ತೆ ಸೇರುವ ರಸ್ತೆ. | 4.00 |
| 3. | ಬಿ.ಬಿ. ರಸ್ತೆಯಿಂದ ಹುಲಿತಿಮ್ಮಾಂಪುರ ಮೂಲಕ ಕೆಂಚಾಪುರಕ್ಕೆ ಹೋಗುವ ರಸ್ತೆ | 3.00 |
| 4. | ಬಿ.ಬಿ. ರಸ್ತೆಯಿಂದ ಉಡೇವಾ ರಸ್ತೆ | 2.50 |
| 5. | ಬಿ.ಬಿ. ರಸ್ತೆಯಿಂದ ಸಂತವೇರಿ ರಸ್ತೆ | 1.00 |
| 6. | ಬಿ.ಬಿ. ಹಿಲ್ ರಸ್ತೆಯಿಂದ ಗಂಗೂರು ಮೇಟೂರು ಮುಖಾಂತರ ಬಿ.ಬಿ. ರಸ್ತೆ ಸೇರುವ ರಸ್ತೆ. | 6.00 |
| 7. | ಬಿ.ಬಿ. ರಸ್ತೆಯಿಂದ ದೋರನಾಳು, ಸುಣ್ಣದಹಳ್ಳಿ, ನಂದಿ-ಹೊಸಳ್ಳಿ ರಸ್ತೆ | 10.00 |
| 8. | ಕೆಂಚಾಪುರದಿಂದ ಗುಳ್ಳದಮನೆ ಕೆಂಚನಹಳ್ಳಿ ರಸ್ತೆ | 3.00 |
| | **ಒಟ್ಟು** | |
| | **ಚಿಕ್ಕಮಗಳೂರು ತಾಲ್ಲೂಕು:** | |
| 1. | ಗುಡ್ಡುದೂರು-ಕಠಾರದಳ್ಳಿ-ಹೊಸಳ್ಳಿ ರಸ್ತೆ | 9.00 |
| 2. | ಆಲದಗುಡ್ಡೆ-ಬಸ್ಕಲ್ ರಸ್ತೆ | 16.50 |
| 3. | ಮಲ್ಲಂದೂರು-ಹೊಲದಗದ್ದೆ-ಕಲ್ಮರಡಿಮಠ ರಸ್ತೆ | 10.00 |
| | **ಒಟ್ಟು** | |
| | **ಮೂಡಿಗೆರೆ ತಾಲ್ಲೂಕು:** | |
| 1. | ಮೂಡಿಗೆರೆ-ತತ್ಕೊಳ-ಕುಂದೂರು ರಸ್ತೆ | 16.00 |
| | **ಕೊಪ್ಪ ತಾಲ್ಲೂಕು:** | |
| 1. | ಕಚಿಗೆ-ಮೇಗೂರು-ಜೈನ ಬಸದಿ- ಕೊಗ್ರೆ ರಸ್ತೆ | 19.90 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

ಪಿ.ಆರ್. 219

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸಿ.ಎಲ್.ಪರಶಿವಮೂರ್ತಿ, ಮಾಜಿ ಪಿಸಿ-612, 5ನೇ ಪಡೆ, ಕೆ.ಎಸ್.ಆರ್.ಪಿ. ಮೈಸೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಉಲ್ಲೇಖ:** 1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 5ನೇ ಪಡೆ, ಕೆಎಸ್‌ಆರ್‌ಪಿ, ಮೈಸೂರು, ಇವರ ಆದೇಶ ಸಂಖ್ಯೆ: ಇಎಸ್‌ಟಿ/2/ವಿವ-40/2004-05, ದಿನಾಂಕ:30-06-2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/14/2005-06, ದಿನಾಂಕ:05-09-2005.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04-12-2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/1/ 2006, ದಿನಾಂಕ:29-06-2006.

**ಪ್ರಸ್ತಾವನೆ:**

ಶ್ರೀ ಸಿ.ಎಲ್.ಪರಶಿವಮೂರ್ತಿ, ಪಿಸಿ-612, ಡಿ ಕಂಪೆನಿ, ಕೆಎಸ್‌ಆರ್‌ಪಿ, 5ನೇ ಪಡೆ, ಮೈಸೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. "ಶ್ರೀ ಸಿ.ಎಲ್.ಪರಶಿವಮೂರ್ತಿ, ಪೇದೆ-612 ಡಿ-ದಳ 5ನೇ ಪಡೆ, ಕೆಎಸ್‌ಆರ್‌ಪಿ, ಮೈಸೂರು ಆದ ನೀವು ದಿನಾಂಕ: 15-12-1986 ರಂದು ಮಂಡ್ಯದಲ್ಲಿ ಶ್ರೀಮತಿ ವಿಜಯಾಂಬಿಕೆ ರವರನ್ನು ಮದುವೆಯಾಗಿ ಓರ್ವ ಪುತ್ರನನ್ನು ಹೊಂದಿರುತ್ತೀರಿ. ನೀವು ಮತ್ತೆ ನಿಮ್ಮ ತಾಯಿಯ ಒತ್ತಾಯದ ಮೇರೆಗೆ ಶ್ರೀಮತಿ ಪದ್ಮ, ರವರನ್ನು ದಿನಾಂಕ:25-05-1989ರಲ್ಲಿ 2ನೇ ಮದುವೆಯಾಗಿರುತ್ತೀರಿ. ನಂತರ ಮೊದಲನೆಯ ಮದುವೆಯನ್ನು ದೃಢಪಡಿಸಿಕೊಳ್ಳುವ ಸಂಬಂಧ ದಿನಾಂಕ:22-02-1990 ರಂದು ಈ ಮೊದಲನೆಯ ಮದುವೆಯನ್ನು ರಿಜಿಸ್ಟರ್ ಕಚೇರಿಯಲ್ಲಿ ನೊಂದಾಯಿಸಿಕೊಂಡಿರುತ್ತೀರಿ."

2. "ಮೇಲಿನ ವ್ಯವಹರಿಕೆಯಿಂದ ಪೊಲೀಸ್ ಪೇದೆಯಾಗಿದ್ದು, ಸರ್ಕಾರಿ ನೌಕರನಿಗೆ ಸಲ್ಲದಂತಹ ಕೃತ್ಯವೆಸಗಿ ಶಿಸ್ತಿನ ಪಡೆಯ ಗೌರವಕ್ಕೆ ಧಕ್ಕೆ ತರುವಂತಹ ಸಂದರ್ಭವನ್ನು ತಂದಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 5ನೇ ಪಡೆ, ಕೆಎಸ್‌ಆರ್‌ಪಿ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:30-06-2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:05-09-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತಮ್ಮ ಮೊದಲನೇ ಪತ್ನಿ ಜೀವಂತವಿರುವಾಗಲೇ ಎರಡನೇ ಮದುವೆಯಾಗಿದ್ದು, ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಸರ್ಕಾರಿ ಸುತ್ತೋಲೆ ಸಂಖ್ಯೆ:ಸಿಆಸುಇ 18 ಸೇಇವಿ 2001 ದಿನಾಂಕ:14-09-2001 ರನ್ವಯ ಕರ್ನಾಟಕ ಲೋಕ ಸೇವಾ ಆಯೋಗದ (ನಡತೆ) ನಿಯಮಗಳು 1966ರ ನಿಯಮ- ಗಳನ್ನು ಉಲ್ಲಂಘಿಸಿ ಎರಡನೇ ಆಗುವುದಕ್ಕೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿ ದಂಡನೆ ವಿಧಿಸಬೇಕೆಂದಿರುತ್ತದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 324 ಪೊಸಿಅ 2006 ಬೆಂಗಳೂರು, ದಿನಾಂಕ:12ಫೆಬ್ರವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಎಲ್.ಪರಶಿವಮೂರ್ತಿ, ಮಾಜಿ ಪಿಸಿ-612, 'ಡಿ' ಕಂಪೆನಿ, 5ನೇ ಪಡೆ, ಕೆಎಸ್‌ಆರ್‌ಪಿ, ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:04-12-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 216

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್.ಎನ್.ವಾಸುದೇವ, ಸಿಪಿಐ, ಮಾನವಿ ವೃತ್ತ, ರಾಯಚೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಉಲ್ಲೇಖ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ/3/ಪಿಆರ್–31/2005, ಓಬಿ ಸಂಖ್ಯೆ:688/2005, ದಿನಾಂಕ:07–07–2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು//95/ಈವ/2005, ದಿನಾಂಕ:25–01–2006.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16–03–2006.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/25/ 2006–07, ದಿನಾಂಕ:28–07–2006.

**ಪ್ರಸ್ತಾವನೆ:**

ಶ್ರೀ ಆರ್.ಎನ್.ವಾಸುದೇವ, ಸಿಪಿಐ, ಮಾನವಿ ವೃತ್ತ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1.ದೋಷರೋಪಣೆ:**

"ಆರ್.ಎನ್.ವಾಸುದೇವ, ಸಿಪಿಐ ಮಾನ್ವಿ ರವರೇ ನೀವು ಸಿರವಾರ ಪೊಲೀಸ್ ಠಾಣೆಯ ಮಹತ್ವದ ರಜಿಸ್ಟರ್‌ಗಳನ್ನು ಪಿಎಸ್ಐ, ಸಿರವಾರ ರವರು ನಿರ್ವಹಿಸುವಲ್ಲಿ ವಿಫಲರಾಗಿದ್ದು, ನೀವು ಮೇಲಾಧಿಕಾರಿಯಾಗಿ ಸೂಕ್ತ ಸಲಹೆ–ಸೂಚನೆಗಳನ್ನು ನೀಡುವಲ್ಲಿ ವಿಫಲರಾದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:07–07–2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಆರು (6) ತಿಂಗಳು ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:25–01–2006ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಹಿಸಿದ ಏನೇ ಕೆಲಸಗಳಿದ್ದರೂ, ಎಲ್ಲದರ ನಡುವೆ ತಾವು ನೀಡಿರುವ ಸಲಹೆ, ಸೂಚನೆಗಳನ್ನು ಕಾರ್ಯರೂಪಕ್ಕೆ ತರಲಾಗಿದೆಯೇ, ಇಲ್ಲವೇ ಎಂಬ ಬಗ್ಗೆ ಪರಿಶೀಲಿಸುವ ಜವಾಬ್ದಾರಿ ಸಹ ಇರುತ್ತದೆ. ಕೆಲಸದ ಒತ್ತಡದಲ್ಲಿ ದೋಷಾರೋಪಣಾ ಪತ್ರಕ್ಕೂ ಸಹ ವಿವರಣೆ ಸಲ್ಲಿಸಿಲ್ಲವೆಂದರೆ, ಅದು ಅವರ ಬೇಜವಾಬ್ದಾರಿತನ ತೋರಿಸುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 457 ಪೊಸಿಅ 2006 ಬೆಂಗಳೂರು, ದಿನಾಂಕ:20}ೈಬಿ ಟ್ಬ್ಚ್ಞ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ಎನ್.ವಾಸುದೇವ, ಸಿಪಿಐ, ಮಾನವಿ ವೃತ್ತ ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:16–03–2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಪಿ.ಆರ್.** 230

**ವಿಷಯ:** ಶ್ರೀ ಇಂದಾದ್ ಪಾಷಾ, ಮಾಜಿ ಸಿಪಿಸಿ-652, ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಹಾಗೂ ಶ್ರೀ ರವಿಕುಮಾರ್ ಸಿಪಿಸಿ-51 ಶಿವಳ್ಳಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿಗಳ ಬಗ್ಗೆ – ಆದೇಶ.

**ಓದಲಾಗಿದೆ:**
1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/2/ಡಿಇ/05/2003-04, ಓಬಿ ಸಂಖ್ಯೆ:03/2005-06, ದಿನಾಂಕಕ:27-03-2005/04-04-2005.
2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/14/18/2005-06, ದಿನಾಂಕ:11-10-2005.
3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:30-11-2005. ಮತ್ತು 07-01-2006.
4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/ 149/2005, ದಿನಾಂಕ:25-03-2006.
5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:PSC/106/ಅಓಖ/06, ದಿನಾಂಕ:26-10-2006 ಮತ್ತು 03-11-2006.

**ಪ್ರಸ್ತಾವನೆ:**

ಶ್ರೀ ಇಂದಾದ್ ಪಾಷಾ, ಮಾಜಿ ಸಿಪಿಸಿ-652 ಕೆಸ್ತೂರು ಪೊಲೀಸ್ ಠಾಣೆ, ಮತ್ತು ಶ್ರೀ ರವಿಕುಮಾರ್ ಮಾಜಿ ಸಿಪಿಸಿ-51, ಶಿವಳ್ಳಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1."ಶ್ರೀ ಇಂದಾದ್ ಪಾಷಾ ಸಿಪಿಸಿ-652 ಇವರು ತಮ್ಮ ಹೆಂಡತಿ ಶ್ರೀಮತಿ ಗುಲ್ವಾರ್ ಖಾನಂ ಎಂಬುವವರಿಗೆ ವರದಕ್ಷಿಣೆಗಾಗಿ ಕಿರುಕುಳ ಕೊಡುತ್ತಿದ್ದ ಕಾರಣ ಮೊಕದ್ದಮೆ ಸಂಖ್ಯೆ:63/03 ಕಲಂ 498(ಎ) 506 ಜೊತೆ 34 IPC ರೀತ್ಯಾ ಕೇಸು ದಾಖಲಾಗಿತ್ತು. ಅಲ್ಲದೆ ಈಶ್ವರಿ ಎಂಬ ಹುಡುಗಿಯನ್ನು ಅಪಹರಿಸಿಕೊಂಡು, ಹೋಗಿ ಆಕೆಯನ್ನು ಬಲವಂತವಾಗಿ ಹಿಂದೂ ಸಂಪ್ರದಾಯದಂತೆ ಮದುವೆ ಆಗಿರುವುದು."

2. "ಶ್ರೀ ರವಿಕುಮಾರ್ ಸಿಪಿಸಿ-51 ಇವರು ಶ್ರೀ ಇಂದಾದ್ ಪಾಷಾನ ಮದುವೆಗೆ ಕುಮ್ಮಕ್ಕು ನೀಡಿ, ಮೊದಲನೆ ಮದುವೆ ಆಗಿರುವುದು ತಿಳಿದಿದ್ದರೂ, ಕು:ಈಶ್ವರಿ ಎಂಬಾಕೆಗೆ ಆಸೆ, ಆಮಿಷ ಒಡ್ಡಿ, ಬಲವಂತವಾಗಿ ದಿನಾಂಕ:13-06-2003ರಂದು ಮುಡುಕುತೊರೆಯ ಭ್ರಮರಾಂಭ ದೇವಸ್ಥಾನದಲ್ಲಿ ಇಂದಾದ ಪಾಷಾ ನೊಡನೆ ಬಲವಂತವಾಗಿ ಆಕೆಯ ಇಚ್ಛೆಗೆ ವಿರುದ್ಧವಾಗಿ ಮದುವೆ ನಡೆಸಿ, ಅಧಿಕಾರ ದುರುಪಯೋಗಪಡಿಸಿಕೊಂಡಿದ್ದು, ಇವರ ಮೇಲೆ ಮೊಕದ್ದಮೆ ಸಂಖ್ಯೆ:53/2003 ಕಲಂ 366-114-119-506 R/W 34 IPC ರೀತ್ಯಾ ಕೇಸು ನೋಂದಣಿ ಆಗಲು ಕಾರಣರಾಗಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರುಗಳ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:27-03-2005/04-04-2005ರ ಆದೇಶದಲ್ಲಿ ಅರ್ಜಿದಾರರುಗಳನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರುಗಳ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಗಳಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರುಗಳ ಮೇಲ್ಮನವಿಗಳನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 11-10-2005ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಗಳಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಅರ್ಜಿದಾರರಿಬ್ಬರ ಮೇಲಿನ ಆರೋಪ ಸಾಬೀತಾಗಿರುತ್ತದೆ. ಇಬ್ಬರು ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯನಿರ್ವಹಿಸುತ್ತಿದ್ದು, ಅರ್ಜಿದಾರರಾದ ಶ್ರೀ ಇಂದಾದ ಪಾಷಾ ರವರಿಗೆ ಈಗಾಗಲೇ ಮದುವೆಯಾಗಿ ಪತ್ನಿ ಜೀವಂತವಾಗಿದ್ದು, ಒಂದು ಮಗುವಿರುವ ವಿಷಯ ತಿಳಿದಿದ್ದರೂ ಸಹ ಇನ್ನೊಬ್ಬ ಅರ್ಜಿದಾರರಾದ ಶ್ರೀ

ರವಿಕುಮಾರ್ ರವರು ಶ್ರೀ ಇಂದಾದ್ ಪಾಷಾ ರವರಿಗೆ ಇನ್ನೊಂದು ಮದುವೆಗೆ ಕುಮ್ಮಕ್ಕು ನೀಡಿರುವುದು, ಇವರಿಬ್ಬರ ಅತೀವ ದುರ್ನಡತೆ, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನಕ್ಕೆ ಸಾಕ್ಷಿಯಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನಾದೇಶವು ಇವರು ಎಸಗಿರುವ ದುರ್ನಡತೆಗೆ ಸಮಂಜಸವಾದ ಶಿಕ್ಷೆ ಎಂದು ಪರಿಗಣಿಸಿ, ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 248 ಪೊಸಿಅ 2006 ಬೆಂಗಳೂರು, ದಿನಾಂಕ:20}ೖಬಿ ಟ್ಬ್ಬ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಪ್ರಾಧಿಕಾರವನ್ನು ಚಲಾಯಿಸಿ, ಶ್ರೀ ಇಂದಾದ ಪಾಷಾ ಮಾಜಿ ಸಿಪಿಸಿ–652 ಕೆಸ್ತೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಮತ್ತು ಶ್ರೀ ರವಿಕುಮಾರ್ ಮಾಜಿ ಸಿಪಿಸಿ–51 ಶಿವಳ್ಳಿ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಗಳನ್ನು ತಿರಸ್ಕರಿಸಲಾಗಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:26–10–2006 ಮತ್ತು 03–11–2006ರ ಪತ್ರಗಳಲ್ಲಿನ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 231

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ದಿವಂಗತ ಎ.ಎಚ್.ಸಿ–221, ಎಸ್.ಎಸ್.ಕುಂದರಗಿ ಇವರಿಗೆ ಕುಟುಂಬ ವಿಶ್ರಾಂತಿ ವೇತನ ಮತ್ತು ಇತರೇ ಆರ್ಥಿಕ ಸೌಲಭ್ಯಗಳನ್ನು ದಿವಂಗತರ ಪತ್ನಿ ಶ್ರೀಮತಿ ಸುವರ್ಣಾ ಶಂಕರ ಕುಂದರಗಿ ಇವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** 1) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ವಿವೇಶಾ/1/ 19/2005–06, ದಿನಾಂಕ:15–05–2006.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:15–05–2006ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಎಸ್.ಎಸ್.ಕುಂದರಗಿ, ಎಹೆಚ್‌ಸಿ–221 ಇತರೆ 10 ಪೊಲೀಸ್ ಅಧಿಕಾರಿಗಳ ವಿರುದ್ಧ ಸರ್ಕಾರಿ ಆದೇಶ ಸಂಖ್ಯೆ:282 ಪೊಸಿಪ 2003, ದಿನಾಂಕ:10–11–2003ರಲ್ಲಿ KCSRs ನ ನಿಯಮ 24 ಹಾಗೂ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗುತ್ತಿದ್ದು, ಎಸ್.ಎಸ್.ಕುಂದರಗಿಯವರು ಬೆಳಗಾವಿ ಮಾರ್ಕೆಟ್ ಪೊಲೀಸ್ ಠಾಣೆ, ಕ್ರೈಂ ಸಂಖ್ಯೆ:59/02 ಕಲಂ 381, 465, 409, 20 ಸಹ ಕಲಂ 13(2)ರಲ್ಲಿ ಮುಖ್ಯ ಆರೋಪಿಯಾಗಿದ್ದು, ಇವರನ್ನು ದಿನಾಂಕ:19–06–2002ರಂದು ದಸ್ತಗಿರಿ ಮಾಡಿದ್ದರಿಂದ ದಿನಾಂಕ: 19–04–2002 ರಿಂದ ಅಮಾನತ್ತಿನಲ್ಲಿಟ್ಟಿದ್ದು, ದಿನಾಂಕ:18–12–2004 ರಂದು ಮರಣ ಹೊಂದಿದ ಕಾರಣ, ದಿನಾಂಕ: 19–04–2002 ರಿಂದ 18–12–2004ರ ತನಕ ಅಮಾನತ್ತೆಂದು ಪರಿಗಣಿಸಲಾಗಿದೆ ಎಂದು ತಿಳಿಸಿ, ಎಸ್.ಎಸ್.ಕುಂದರಗಿಯವರು ಇಲಾಖಾ ವಿಚಾರಣೆಯಲ್ಲೇ ಮೃತಪಟ್ಟಿರುವ ಕಾರಣ, ಕೆಸಿಎಸ್‌ಆರ್ ನ ನಿಯಮ 100 (2)ರನ್ವಯ ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಬೇಕಾಗುತ್ತದೆ ಎಂದು ತಿಳಿಸಿ, ದಿವಂಗತ ಎಸ್.ಎಸ್.ಕುಂದರಗಿಯವರ ಪತ್ನಿ ಶ್ರೀಮತಿ ಸುವರ್ಣಾ ಶಂಕರ ಕುಂದರಗಿ ಯವರಿಗೆ ನೀಡಬೇಕಾಗಿರುವ ಆರ್ಥಿಕ ಸವಲತ್ತುಗಳನ್ನು ಮಂಜೂರು ಮಾಡಬೇಕಾಗಿರುವ ಕಾರಣ, ದಿವಂಗತ ಎಸ್.ಎಸ್.ಕುಂದರಗಿ, ರವರ ಅಮಾನತ್ತಿನ ಅವಧಿಯನ್ನು ಕರ್ತವ್ಯವೆಂದು ಪರಿಗಣಿಸಿ, ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 233 ಪೊಸಿಅ 2006 ಬೆಂಗಳೂರು, ದಿನಾಂಕ:20ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿವಂಗತ ಎಸ್.ಎಸ್.ಕುಂದರಗಿ, ಎಎಚ್‌ಸಿ–221 ಇವರ ಅಮಾನತ್ತಿನ ಅವಧಿ ದಿನಾಂಕ:19–04–2002 ರಿಂದ 18–12–2004 ರವರೆಗೆ ಕರ್ತವ್ಯವೆಂದು ಕೆಸಿಎಸ್‌ಆರ್ ನ ನಿಯಮ 100 (2)ರನ್ವಯ ಪರಿಗಣಿಸಿ, ಆರೋಪಗಳಿಂದ ಮುಕ್ತಗೊಳಿಸಲಾಗಿದೆ.

ಸದರಿ ನಿಯಮಾವಳಿಯ ನಿಯಮ 100 (2) ರನ್ವಯ ದಿವಂಗತ ಎಸ್.ಎಸ್.ಕುಂದರಗಿಯವರನ್ನು ಅವಧಿ ಅಮಾನತ್ತುಗೊಳಿಸದೇ ಇದ್ದಿದ್ದರೆ, ಅವರು ಪಡೆಯಲು ಹಕ್ಕುಳ್ಳವರಾಗಿದ್ದ ಪೂರ್ಣ ವೇತನ ಮತ್ತು ಭತ್ಯೆಗಳನ್ನು ಈಗಾಗಲೇ ಸಂದಾಯ ಮಾಡಲಾಗಿರುವ ಜೀವನಾಂಶ ಭತ್ಯಕ್ಕೆ ಸಂಬಂಧಿಸಿದ ಹೊಂದಾಣಿಕೆಗೆ ಒಳಪಟ್ಟು ಅವರ ಕುಟುಂಬಕ್ಕೆ ಸಂದಾಯ ಮಾಡತಕ್ಕದ್ದು.

ಈ ಆದೇಶವನ್ನು ಒಳಾಡಳಿತ ಇಲಾಖೆಯ ಆಂತರೀಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ:ಒಸಾಇ 25476 ಅಂಆಸ 2006, ದಿನಾಂಕ:08-06-2006ರ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 232 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎ.ಎನ್.ಗಾಳಿ, ಸಿಪಿಐ, ರಾಯಬಾಗ್ ವೃತ್ತ, ಬೆಳಗಾಂ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ - ಆದೇಶ.

**ಉಲ್ಲೇಖ:** 1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ-ಧಾರವಾಡ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-3/ನಿಯಮ 07/26/2005-06, ಆಪು ಸಂಖ್ಯೆ:43/2005, ದಿನಾಂಕ:11-08-2005.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ/8/42/2005-06, ದಿನಾಂಕ:27-01-2006.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 02-05-2006.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/42/ 2005-06, ದಿನಾಂಕ:04-11-2006.

**ಪ್ರಸ್ತಾವನೆ:**

ಶ್ರೀ ಎ.ಎನ್.ಗಾಳಿ, ಸಿಪಿಐ ರಾಯಬಾಗ್ ವೃತ್ತ, ಬೆಳಗಾಂ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೊಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ನೀವು ಹುಬ್ಬಳ್ಳಿಯ ಸರ್ಕಾರಿ ಪ್ರವಾಸಿ ಮಂದಿರದಲ್ಲಿ ವಾಸಿಸುತ್ತಿದ್ದು, ಸದರಿ ಪ್ರವಾಸಿ ಮಂದಿರದ ಕೊಠಡಿಯ ಬಾಡಿಗೆ ರೂ.7,415-00 ಗಳು ಇದ್ದು, ಸದರಿ ಮೊತ್ತವನ್ನು ಪಾವತಿಸಲು ಸಂಭಂದಿಸಿದವರಿಂದ ನಿಮಗೆ ಅನೇಕ ಬಾರಿ ಪತ್ರ ಬಂದಿದ್ದರು ಸಹಿತ ಸದರಿ ಬಾಡಿಗೆಯನ್ನು ಪಾವತಿಸದೆ ಇರುತ್ತೀರಿ. ನೀವು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು ಸಂಭಂದಪಟ್ಟವರಿಂದ ಬಾಡಿಗೆ ಪಾವತಿಸಲು ಅನೇಕ ಬಾರಿ ಪತ್ರ ವ್ಯವಹಾರ ನಡೆದಿದ್ದರೂ ಸಹಿತ ಬಾಡಿಗೆಯನ್ನು ಪಾವತಿಸದೆ ಈ ಬಗ್ಗೆ ಸಂಭಂದಿಸಿದವರಿಂದ ಈ ಕಚೇರಿಗೆ ಪತ್ರ ವ್ಯವಹಾರ ಆಗುವಂತೆ ಮಾಡಿ, ಇಲಾಖೆಗೆ ಮುಜುಗುರ ಉಂಟು ಮಾಡಿರುವದಲ್ಲದೇ, ನೀವು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ, ನಿಷ್ಕಾಳಜಿತನ ಮತ್ತು ತೀವ್ರ ಉದಾಸೀನತೆ ತೋರ್ಪಡಿಸಿದ ಅಪರಾಧ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೋಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಹುಬ್ಬಳ್ಳಿ-ಧಾರವಾಡ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:11-08-2005ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:27-01-2006ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಪೋಲೀಸ್ ಅಧಿಕಾರಿಯಾಗಿ, ತಿಳುವಳಿಕೆಯುಳ್ಳವರಾಗಿದ್ದು, ಬಾಡಿಗೆ ಹಣ ಪಾವತಿ ಮಾಡುವಲ್ಲಿ ಅನಗತ್ಯ ವಿಳಂಬ ಮಾಡಿರುವುದು ಸ್ಪಷ್ಟವಾಗಿರುತ್ತದೆ. ಸಕಾಲದಲ್ಲಿ ಬಾಡಿಗೆ ಹಣ ಪಾವತಿ ಮಾಡಿದ್ದರೆ, ಶಿಸ್ತು ಕ್ರಮ ಕೈಗೊಳ್ಳುವ ಪ್ರಮೇಯವೇ ಉದ್ಭವಿಸುತ್ತಿರಲಿಲ್ಲ ಇವರ ಬೇಜವಾಬ್ದಾರಿತನದಿಂದ, ನಿರ್ಲಕ್ಷತನದಿಂದ ಇಲಾಖೆ ಮುಜುಗರ ಪಡುವಂತೆ ಮಾಡಿರುವುದು ಕಂಡುಬರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 495 ಪೊಸಿಅ 2006 ಬೆಂಗಳೂರು, ದಿನಾಂಕ:20ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎ.ಎನ್.ಗಾಳಿ, ಸಿಪಿಐ, ರಾಯಬಾಗ್ ವೃತ್ತ, ಬೆಳಗಾಂ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:02-05-2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 233

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಗುತ್ತಿಗೆ ಆಧಾರದ ಮೇಲೆ ಡಾ:ಮಾಲಿ ಇವರ ಸೇವೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 163 ಪಿಓಪಿ 2003 ದಿನಾಂಕ: 3.1.2003.
2) ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 78 ಪಿಓಪಿ 2004 ದಿನಾಂಕ: 15.2.2005.
3) ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 114 ಪಿಓಪಿ 2005 ದಿನಾಂಕ: 20.7.2005.
4) ಸರ್ಕಾರದ ಆದೇಶ ಸಂಖ್ಯೆ:ಒಇ 28 ಪೊಸಿಲಿ 2005 ದಿನಾಂಕ: 23.3.2006.
5) ನಿರ್ದೇಶಕರು ನ್ಯಾಯ ವಿಜ್ಞಾನ ಪ್ರಯೋಗಾಲಯ ರವರ ಪತ್ರ ಸಂಖ್ಯೆ:ಇಎಸ್‌ಟಿ-46(I)/ಎಫ್‌ಎಸ್‌ಎಲ್/5037/98-99 ದಿನಾಂಕ:8.12.2006.

**ಪ್ರಸ್ತಾವನೆ :**

ಮೇಲೆ ಓದಲಾದ(1)ರ ಆದೇಶದಲ್ಲಿ, ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ಡಾ:ಮಾಲಿನಿ, ಸಹಾಯಕ ನಿರ್ದೇಶಕರು, (ಫೋರೆನ್ಸಿಕ್ ಸೈಕಾಲಜಿ) ಹುದ್ದೆಯಲ್ಲಿ ದಿನಾಂಕ: 9.7.2003 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ. ತದಂತರ ಮೇಲೆ ಓದಲಾದ ಉಲ್ಲೇಖಿಸಿರುವ ಸರ್ಕಾರದ ಆದೇಶಗಳಲ್ಲಿ ಇವರ ಗುತ್ತಿಗೆ ನೇಮಕಾತಿಯ ಅವಧಿಯನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಓದಲಾದ (4)ರ ಆದೇಶದಲ್ಲಿ ದಿನಾಂಕ: 1.10.2005 ರಿಂದ 31.12.2006 ಅಥವಾ ಮುಂದಿನ ಆದೇಶದ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇವರ ಗುತ್ತಿಗೆ ಆಧಾರದ ನೇಮಕಾತಿಯನ್ನು ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಮತ್ತು ಓದಲಾದ (5)ರಲ್ಲಿ ಡಾ:ಮಾಲಿನಿಯವರು ಪೊಲೀಸ್ ಇಲಾಖೆಯಲ್ಲಿ ನ್ಯಾಯ ವಿಜ್ಞಾನ ಪ್ರಯೋಗಾಲಯಕ್ಕೆ ಮಾಸಿಕ ರೂ.10,600/-ಗಳ ನಿಗದಿತ ವೇತನದೊಂದಿಗೆ ದಿನಾಂಕ:1.1.2007 ರಿಂದ ಮುಂದುವರಿಸುವ ಬಗ್ಗೆ ಆದೇಶ ಹೊರಡಿಸುವಂತೆ ನಿರ್ದೇಶಕರು ನ್ಯಾಯ ವಿಜ್ಞಾನ ಪ್ರಯೋಗಾಲಯ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಸೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 54 ಪೊಸಿಲಿ 2006, ಬೆಂಗಳೂರು, ದಿನಾಂಕ: 20ನೇ ಜನವರಿ 2007**

ಪ್ರಸ್ತಾನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ನ್ಯಾಯ ವಿಜ್ಞಾನ ಪ್ರಯೋಗಾಲಯದಲ್ಲಿ ಸಹಾಯಕ ನಿರ್ದೇಶಕರು, (ಫೋರೆನ್ಸಿಕ್ ಸೈಕಾಲದಜಿ) ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಸೇವೆ ಸಲ್ಲಿಸುತ್ತಿರುವ ಡಾ:ಮಾಲಿನಿ ಯವರ ಸೇವೆನ್ನು ಹಾಲಿ ನೀಡುತ್ತಿರುವ ಮಾಸಿಕ ವೇತನ ರೂ.10,600/- ಗನ್ನು ನೀಡುವ ಷರತ್ತಿಗೊಳಪಟ್ಟು ಅಂತಿಮವಾಗಿ ದಿನಾಂಕ: 1.1.2007 ರಿಂದ 6 ತಿಂಗ ಅವಧಿಗೆ ಅಥವಾ ಸದರಿ ಹುದ್ದೆಯನ್ನು ನೇರ

ನೇಮಕಾತಿಯಿಂದ ಭರ್ತಿ ಮಾಡುವವರೆಗೂ ಇವುಗಳಲ್ಲಿ ಯಾವುದು ಮೊದಲು ಘಟಿಸುವುದೋ ಅಲ್ಲಿಯವರೆಗೆ, ಇವರ ಗುತ್ತಿಗೆ ಆಧಾರದ ನೇಮಕಾತಿಯನ್ನು ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಲಾಗಿದೆ. ಈ ಮುಂದುವರಿಕೆಯು ಈ ಹುದ್ದೆಗೆ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೂಕ್ತವಾಗಿ ನೇಮಕಾತಿ ವಿಧಾನ ನಿಗದಿಪಡಿಸಿ ಕೂಡಲೇ ಭರ್ತಿಮಾಡಿಕೊಳ್ಳುವ ಷರತ್ತಿಗೆ ಒಳಪಟ್ಟಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಸಿಆಸುಇ 13 ಸೇಸೆನಿ 2005 ದಿನಾಂಕ: 11.1.2007ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 234

**ವಿಷಯ:** ಶ್ರೀ ಜಿ.ರಾಮಕೃಷ್ಣಯ್ಯ, ಪಿಸಿ-75, ಎ ಕಂಪನಿ, 8ನೇ ಪಡೆ, ಕೆಎಸ್‌ಆರ್‌ಪಿ, ಶಿವಮೊಗ್ಗ ಇವರ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು, ಇವರ ಆದೇಶ ಸಂಖ್ಯೆ:ಡಿಇ/17/2001-02, ದಿನಾಂಕ:31-01-2005.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು/6/7/ 2004-05, ದಿನಾಂಕ:20-04-2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:01-02-2006.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/26/2006, ದಿನಾಂಕ:07-10-2006.

**ಪ್ರಸ್ತಾವನೆ:**

ಶ್ರೀ ಜಿ.ರಾಮಕೃಷ್ಣಯ್ಯ, ಪಿಸಿ-75, ಎ ಕಂಪೆನಿ, 8ನೇ ಪಡೆ, ಕೆಎಸ್‌ಆರ್‌ಪಿ, ಶಿವಮೊಗ್ಗ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. "ಶ್ರೀ ಆರ್.ಎನ್.ಎಸ್.ಗೌಡ, ಹವಲ್ದಾರ್-42, ಮತ್ತು ಶ್ರೀ ಜಿ.ರಾಮಕೃಷ್ಣಯ್ಯ, ಪಿಸಿ-75, 8ನೇ ಪಡೆ, ಕೆಎಸ್‌ಆರ್‌ಪಿ, ಶಿವಮೊಗ್ಗ, ರವರು ಈ ಹಿಂದೆ 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಘಟಕದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಅವರೊಂದಿಗೆ ಇತರೇ ಇಬ್ಬರು ಅಧಿಕಾರಿಗಳು ಶಾಮೀಲಾಗಿ ದುರ್ನಡತೆ ಪ್ರದರ್ಶಿಸಿದ್ದರಿಂದ, ಸದರಿಯವರುಗಳ ವಿರುದ್ಧ ಕೆ.ಎಸ್.ಪಿ.(ಡಿಪಿ) ರೂಲ್ಸ್, 1965ರ ನಿಯಮ 6 ರೆಡ್‌ಮಿತ್ 8ರ ಅಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿ ಈ ಕೆಳಕಂಡ ಆರೋಪಗಳನ್ನು ಹೊರಿಸಲಾಗಿತ್ತು.

2. "ಸುಪ್ರಿಯ ರಿಯಲ್ ಎಸ್ಟೇಟ್ ಏಜೆನ್ಸಿ ಸಂಸ್ಥೆಯ ಮೂಲಕ ಪೊಲೀಸ್ ಸಿಬ್ಬಂದಿಗಳಿಗೆ ಮತ್ತು ಸಾರ್ವಜನಿಕರಿಗೆ ಕಡಿಮೆ ಬೆಲೆ, ಸುಲಭ ಕಂತು ಹಾಗೂ ಸರಳ ರೂಪದಲ್ಲಿ ನಿವೇಶನ ನೀಡುತ್ತೇವೆಂದು ನಂಬಿಸಿ ಅವರಿಂದ ಸುಮರು ರೂ.3,53,400-00 ಹಣ ಪಡೆದು ನಿವೇಶನ ಆಕಾಂಕ್ಷಿಗಳಿಂದ ಹಣ ಸ್ವೀಕರಿಸಿದ ಬಗ್ಗೆ ಸ್ವೀಕೃತಿ ನೀಡಿದ್ದು (ಲಭ್ಯವಿರುವಂತೆ) ನಿವೇಶನವನ್ನು ನೀಡದೆ ಅಥವಾ ಹಣವನ್ನು ವಾಪಸ್ ನೀಡದೆ ಸದರಿ ಹಣವನ್ನು ವಾಪಸ್ಸು ಮಾಡುವಂತೆ ನಿಮ್ಮನ್ನು ಮತ್ತು ನಿಮ್ಮ ಕುಟುಂಬ ಸದಸ್ಯರನ್ನು ಕೇಳಿದಾಗ ನೀವುಗಳು ಅವರುಗಳಿಗೆ ಅವಾಚ್ಯ ಶಬ್ದಗಳಿಂದ ಬೈದು ಸಿಬ್ಬಂದಿಗಳಿಗೆ ವಂಚಿಸಿರುವುದು ಶಿಸ್ತಿನ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ನಿಮ್ಮ ಮೇಲಿನ ಗಂಭೀರ ಸ್ವರೂಪದ ಆರೋಪವಾಗಿರುತ್ತದೆ."

3. "ಪೊಲೀಸ್ ಸಿಬ್ಬಂದಿ ಮತ್ತು ಕುಟುಂಬ ವರ್ಗದವರಿಗೆ ಮತ್ತು ಸಾರ್ವಜನಿಕರಿಗೆ ಸುಪ್ರಿಯ ರಿಯಲ್ ಎಸ್ಟೇಟ್ ಏಜೆನ್ಸಿ ಮುಖಾಂತರ ಕಡಿಮೆ ಬೆಲೆಯಲ್ಲಿ ಮತ್ತು ಸುಲಭ ರೀತಿಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ದೊಡ್ಡನಾಗಮಂಗಲ ಗ್ರಾಮಕ್ಕೆ ಹೊಂದಿಕೊಂಡಂತೆ ಇರುವ ಅಸಲಿ ಸರ್ವೇ ನಂಬರ್ 10ರಲ್ಲಿ ಕೆಲವು ಎಕರೆ ಜಮೀನನ್ನು

ಖರೀದಿಸಿ ಜಮೀನಿನಲ್ಲಿ ನಿವೇಶನಗಳನ್ನು ಹಂಚುತ್ತೇವೆಂದು ಸಿಬ್ಬಂದಿಗೆ ಮತ್ತು ಸಾರ್ವಜನಿಕರಿಗೆ ತೋರಿಸಿರುವ ಸ್ಥಳವು ಸರ್ಕಾರದ ಗೋಮಾಳದ ಸ್ಥಳವಾಗಿದ್ದರೂ ಸಹ ನೀವು ''ನಾವು ಖರೀದಿಸಿದ್ದೇವೆ'' ಎಂದು ಸುಳ್ಳು ಹೇಳಿ ನೀವುಗಳು ಒಟ್ಟಿಗೆ ಸೇರಿ ಫೋರ್ಜರಿ ದಾಖಲೆ ಸೃಷ್ಟಿಸಿ ಸಿಬ್ಬಂದಿಗೆ ಮತ್ತು ಸಾರ್ವಜನಿಕರಿಗೆ ವಂಚಿಸಿರುವುದು ನಿಮ್ಮ ಮೇಲಿನ ಗಂಭೀರ ಅಪರಾಧ ಸ್ವರೂಪದ ಆರೋಪವಾಗಿರುತ್ತದೆ.

4. "ಬೆಂಗಳೂರು ದಕ್ಷಿಣ ತಾಲ್ಲೂಕು, ಬೇಗೂರು ಹೋಬಳಿ, ದೊಡ್ಡನಾಗಮಂಗಲದಲ್ಲಿ (ಉದ್ದೇಶಿತ ವಸತಿ ನಿವೇಶನ) ಹಂಚಿಕೆ ಮಾಡಲಾಗುವ ಸ್ಥಳಕ್ಕೆ ಸಿಬ್ಬಂದಿಗಳನ್ನು ಮತ್ತು ಸಾರ್ವಜನಿಕರನ್ನು ಕಮಾಂಡೆಂಟ್, 3ನೇ ಪಡೆಗೆ ಸೇರಿದ ಸರ್ಕಾರಿ ವಾಹನದಲ್ಲಿ ಕರೆದುಕೊಂಡು ಹೋಗಿ ಬಂದಿರುವ ಮೂಲಕ ಸರ್ಕಾರಿ ವಾಹನವನ್ನು ಉಪಯೋಗಿಸುವ ಮೂಲಕ ಸರ್ಕಾರಿ ವಾಹನವನ್ನು/ನಿಮ್ಮ ಅಧಿಕಾರವನ್ನು ದುರುಪಯೋಗ ಮಾಡಿಕೊಂಡಿರುವುದು ನಿಮ್ಮ ಮೇಲಿನ ಮತ್ತೊಂದು ಆರೋಪವಾಗಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ-1 ನಿಸ್ಸಂದೇಹವಾಗಿ ಸಾಬೀತಾಗಿದೆ ಎಂದೂ, ಆರೋಪ-2 ಭಾಗಶ: ಸಾಬೀತಾಗಿದೆ ಎಂದೂ ಹಾಗೂ 3 ಮತ್ತು 4 ಆರೋಪಗಳು ಸಾಬೀತಾಗಿಲ್ಲವೆಂದೂ ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 31-01-2005ರ ಆದೇಶದಲ್ಲಿ ಅರ್ಜಿದಾರರನ್ನು ಕೆಸಿಎಸ್ ನಿಯಮಾವಳಿಗಳು 1958ರ ನಿಯಮ 95(3)ರ ಪ್ರಕಾರ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರು ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ತಮ್ಮ ಆದೇಶ ದಿನಾಂಕ:20-04-2005ರಲ್ಲಿ ಅರ್ಜಿದಾರರನ್ನು ಸೇವೆಗೆ ಪುನರ್‌ನೇಮಕ ಮಾಡಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಸಂಚಿತ ಪರಿಣಾಮ ಬೀರುವಂತೆ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೂ, ಕರ್ತವ್ಯದಿಂದ ಹೊರಗುಳಿದ ಅವಧಿಯನ್ನು ಹೊರಗುಳಿದ ಅವಧಿಯೆಂದೇ ದಿನಾಂಕ:20-04-2005 ರ ಆದೇಶದಲ್ಲಿ ಪರಿಗಣಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪಗಳು ಗಂಭೀರ ಸ್ವರೂಪದ್ದಾಗಿರುತ್ತದೆ. ಈಗಾಗಲೇ ಮೇಲ್ಮನವಿ ಪ್ರಾಧಿಕಾರಿಯು ಶಿಸ್ತುಪ್ರಾಧಿಕಾರಿ ವಿಧಿಸಿರುವ ದಂಡನೆಯನ್ನು ಮಾರ್ಪಡಿಸಿ, ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ನೇಮಕ ಮಾಡಿರುತ್ತಾರೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 454 ಪೊಸಿಅ 2006 ಬೆಂಗಳೂರು, ದಿನಾಂಕ:20ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ.ರಾಮಕೃಷ್ಣಯ್ಯ, ಪಿಸಿ-75, ಎ ಕಂಪೆನಿ, 8ನೇ ಪಡೆ, ಕೆಎಸ್‌ಆರ್‌ಪಿ, ಶಿವಮೊಗ್ಗ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:01-02-2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 235

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**INFORMATION TECHNOLOGY, BIOTECHNOLOGY AND SCIENCE & TECHNOLOGY SECRETARIAT**

**Sub:** Project proposal of **M/s. ITASCA Software Development Pvt. Ltd., to establish a "SEZ for IT/ITES Sector" in Devanahalli Taluk, Bangalore Rural District**.- Approval for – Orders – Reg.

**Read:** Proceedings of the 7th State High Level Clearance Committee (SHLCC) meeting held on 28-08-2006.

**PREAMBLE:**

M/s.ITASCA Software Development Pvt. Ltd. Company, incorporated under Indian Companies Act, 1956, on 28th January 2004, in Bangalore. The main objects of the company are to provide multi dimensional computer services, covering, hardware, software maintenance, BPO etc.

In the proposal submitted for the 7th State High Level Clearance Committee (SHLCC) meeting held on 28-8-2006, the Company had requested approval to **establish a "SEZ for IT /ITES Sector", with an investment of Rs. 1130.00 in 325 acres of land (proposed Hardware Technology Park), on consent in 91 different Sy.Nos. in Bandekodagenahalli Village, Devanahalli Taluk, Bangalore Rural District** and to provide Infrastructure facilities / Incentives and concessions. The project proposes to provide employment to about 75,000 persons.

Government have examined the recommendations of the SHLCC Hence the following order:

**Government Order No: ITD 42 MDA 2006 (01), Bangalore, Dated: 16th January 2007**

In the circumstances explained in the Preamble, Government are pleased to accord approval to **M/s. ITASCA Software Development Pvt. Ltd., to establish a "SEZ for IT /ITES Sector", with an investment of Rs. 1130.00 in 325 acres of land (proposed Hardware Technology Park), on consent in 91 different Sy.Nos. in Bandekodagenahalli Village, Devanahalli Taluk.** The infrastructure assistance / incentives and concessions to be extended with the following facilities and incentives are:

**INFRASTRUCTRE FACILITIES:**

**LAND:**

KIADB to acquire and allot 325 acres of land (proposed Hardware Park), through consent award process in different Sy.Nos., in Bandekodagenahalli Village, Devanahalli Taluk, Bangalore Rural District.

**POWER:**

46375 KVA from BESCOM

**WATER:**

4 MLD of water form BWSSB, for the project. The promoter is advised to set up sewage treatment plant, adopt water recycling and water harvesting.

**INCENTIVES & CONCESSIONS:**

As per Millennium IT Policy and benefits available under SEZ Policy.

**Environment Clearance:**

Clearances to be obtained from MOEF, GOI & KSPCB.

**Approval of SEZ Status:**

To recommend to GOI, for grant of SEZ status.

**Employment:**

Local employment to be provided as per Government policy.

**Others:**

The Promoter shall submit milestones / progress in implementation of the project regularly, which will be monitored by the Departments concerned.

The Department of Information Technology & Biotechnology shall further process the proposal for requisite clearances by coordinating with various Departments Concerned.

By Order and in the name of the Governor of Karnataka

**T.B. RENUKAPRASAD**

Under Secretary to Government,
Information Technology, Biotechnology
and Science & Technology Department.

**Sub:** Project proposal of M/s Adarsh Prime Projects Private Ltd., to establish **"IT/ITES-SEZ" at Bangalore**. – Approval for Orders-Reg.

**Read:** Proceedings of the 7th State High Level Clearance Committee (SHLCC) meeting held on 28-08-2006.

**PREAMBLE:**

M/S Adarsh Prime Projects Private Ltd is a Private limited company incorporated under Indian Companies Act (originally incorporated as M/s. Adarsh Projects Pvt. Ltd). The company is a part of Adarsh Group consisting of M/s Adarsh Developers, M/s Adarsh Realty & Hotels P. Ltd, M/s Adarsh Property Developments, M/s Orchids Apartments P. Ltd.

In the proposal submitted for the 7th State High Level Clearance Committee (SHLCC) meeting held on 28-08-2006, the Company had requested for various Infrastructure facilities, Incentives and Concession as envisaged in the Millennium Information Technology Policy from the Government. The proposal is to establish **"Information Technology / Information Technology Enable Services Special Economic Zone (IT/ITES-SEZ)",** with an investment of Rs. 5867.00 Crores in the land of 1270 acres located in various Sy.Nos. of Bilichikkanahalli, Andenahalli, Alibommasandra, Aadigonadanahalli, Muttanallur, Chikkadunnasandra, Bikkanahalli, Sammanahalli, Kotaganahalli, Sollepura, Buragunte and Muttanallur Amanikere villages of Sarjapura Hobli, Anekal Taluk, Bangalore Urban District. The Project envisages setting up of around 210 units. The project proposes to provide employment to about 135000 persons. The decision on the subject was deferred in the 6$^{th}$ SHLCC meeting, so as to obtain the views / concurrence of BMRDA on the above said land.

The Commissioner BMRDA intimated the Committee that Anekal Taluk has since been classified as "Area Planning Zone – APZ -5" and the preparation of interim master plan for all the designated APZs is under progress as such the present project shall be incorporated in the Master Plan.

Government have examined the recommendations of the SHLCC Hence the following order:

**Government Order No: ITD 42 MDA 2006 (2), Bangalore, Dated: 16th January 2007.**

In the circumstances explained in the Preamble, Government are pleased to accord approval to project proposal of M/s Adarsh Prime Projects Private Ltd to establish a "IT/ITES-SEZ with an investment of Rs. 5867.00 Crores in 1158 acres in Sarjapura Hobli, Anekal Taluk, Bangalore Urban District, with the following facilities and incentives.

**INFRASTRUCTRE FACILITIES:**

**LAND:**

KIADB to acquire and allot 1158 acres of land through consent award process as "SUC", in various Sy. Nos. of Bilichikkanahalli, Andenahalli, Alibommasandra, Aadigondanahalli, Muttanallur, Chikkadunnasandra, Bikkanahalli, Sammanahalli, Kotaganahalli, Sollepura, Buragunte and Muttanallur Amanikere villages of Sarjapura Hobli, Anekal Taluk, Bangalore Urban District.

**WATER :**

10 million liters per day from BWSSB. The promoter is advised to set up sewage treatment plant, adopt water recycling and water harvesting.

**POWER :**

250 MW from BESCOM.

**Approval of SEZ Status**: To recommend to Govt. of India for grant of SEZ Status.

**INCENTIVES & CONCESSIONS :**

As per Millennium IT Policy and benefits available under SEZ Policy.

**Environment & Pollution Control Clearances:**

The Promoters were advised to obtain CFE from KSPCB and ECC from MOEF, GOI.

**Providing Local Employment:**

Local Employment to be provided as per Government Policy.

**Others:**

The Promoter shall submit milestones / progress in implementation of the project regularly, which will be monitored by the Departments concerned.

The Department of Information Technology & Biotechnology shall further process the proposal for requisite clearances by coordinating with various Departments Concerned.

By Order and in the name of the Governor of Karnataka

**T.B.RENUKAPRASAD**

Under Secretary to Government
Information Technology, Biotechnology
and Science & Technology Department

**Sub:** Project proposal of M/s Bagmane Developers Private Ltd., to establish an **"IT/ITES-SEZ" at C.V. Raman Nagar, Bangalore**. - Approval for – Orders – Reg.

**Read:** Proceedings of the 7th State High Level Clearance Committee (SHLCC) meeting held on 28-08-2006.

**PREAMBLE:**

M/s. Bagmane Developers Private Ltd., is a limited company, incorporated under Indian Companies Act, 1956. The company is engaged in business of development / construction of apartments, shopping complex, commercial complexes, hotels, health clubs, etc. The income of the company for the year ended 31st March 2005 is Rs. 59.62 Crores.

In the proposal submitted for the 7th State High Level Clearance Committee (SHLCC) meeting held on 28-08-2006, the Company had requested approval to establish an **"IT & ITES Special Economic Zone"** with an investment of Rs. 889.66 Crores, in 39 acres 36 guntas of their own land at Municipal No. 65/2, C.V. Raman Nagar, K.R. Puram Hobli, Bangalore. The project proposes to provide employment to about 33000 persons.

The decision on the subject was deferred in the 6th SHLCC meeting, so as to obtain the views / concurrence of BDA. Subsequently the promoters have reduced the extent of land to 29 acres 39 guntas in the said location for the said project, excluding the land reserved for valley zone. The Commissioner BDA informed the committee that the change of land use of the proposal land will be considered.

Government have examined the recommendations of the SHLCC Hence the following order:

**Government Order No: ITD 42 MDA 2006 (3), Bangalore, Dated:16th January 2007.**

In the circumstances explained in the Preamble, Government are pleased to accord approval to M/s Bagmane Developers Private Ltd to establish **"IT/ITES-SEZ"**, with an investment of Rs. 889.66 Crores, in 29 acres 39 guntas of their own land at Municipal No. 65/2, C.V. Raman Nagar, K.R. Puram Hobli, Bangalore with the following facilities and incentives.

**INFRASTRUCTRE FACILITIES:**

**LAND:**

Permission to establish "IT & ITES" in 29 acres 39 guntas of their own land at Municipal No. 65/2, C.V. Raman Nagar, K.R. Puram Hobli, Bangalore. BDA to approve the layout plan.

**POWER :**

37.2 MW from BESCOM

**WATER :**

15.10 lakh lpd from BWSSB. The promoter is advised to set up sewage treatment plant, adopt water recycling and water harvesting.

**Approval of SEZ Status**: To recommend to Govt. of India for grant of SEZ Status.

**INCENTIVES & CONCESSIONS :**

As per Millennium IT Policy and benefits available under SEZ Policy.

**Environment:**

The promoters were advised to obtain CFE from KSPCB and ECC from MOEF, GOI.

**Employment:**

Local employment to be provided as per Government policy.

**Others:**

The Promoter shall submit milestones / progress in implementation of the project regularly, which will be monitored by the Departments concerned.

The Department of Information Technology & Biotechnology shall further process the proposal for requisite clearances by coordinating with various Departments Concerned.

By Order and in the name of the Governor of Karnataka

**T.B.RENUKAPRASAD**

Under Secretary to Government
Information Technology, Biotechnology
and Science & Technology Department

**Sub:** Project proposal of M/s Bagmane Constructions Private Ltd., to establish an **"IT/ITES-SEZ"** **at Doddanakunte Mahadevapura Village, Bangalore** – Approval for – Orders-Reg.

**Read:** Proceedings of the 7th State High Level Clearance Committee (SHLCC) meeting held on 28-08-2006.

**PREAMBLE:**

M/s. Bagmane Constructions Private Ltd is a limited company, had proposed to establish an **"IT & ITES Special Economic Zone"** with an investment of Rs. 670.30 Crores in 30 acres of land in Doddanekundi village and Mahadeveapura village, K.R. Puram, Hobli, Bangalore East taluk. The company has made MoU with the owners of the land, Sy.Nos. 61, 63, 110, 111 & 112 of Mahadevapura village for joint development of the land (16 acres) and for the balance land of 14 acres in Sy.Nos. 39/6, 56, 58/2 & 59/2 of Doddanekundi village, the company has entered into sale agreement with the land owners. The project proposes to provide employment to about 23818 persons.

The decision on the subject was deferred in the 6th SHLCC meeting, so as to obtain the views / concurrence of BDA.

Subsequently, the promoters have reduced the extent of land to 28.5 acres in the said location for the said project, excluding the land reserved for Pubic / Semi-Public and Park zone and including 1 acre 21 guntas at Sy.No. 56 of Doddanekundi village. The Commissioner BDA informed the committee that the change of land use of the proposal land will be considered.

In the proposal submitted for the 7th State High Level Clearance Committee (SHLCC) meeting held on 28-08-2006, the Company had requested approval to establish an **"IT & ITES Special Economic Zone"** and to extend the benefits of Incentives and Concessions as per the IT MIllenium Policy and Infrastructure facilities.

Government have examined the recommendations of the SHLCC Hence the following order:

**Government Order No: ITD 42 MDA 2006 (4), Bangalore, Dated: 16th January 2007**

In the circumstances explained in the Preamble, Government are pleased to accord approval to M/s Bagmane Constructions Private Ltd to establish a **"IT/ITES-SEZ",** with an investment of Rs. 670.30 Crores, in 28.5 acres land at Sy.Nos. 110, 111, 112 of Mahadevapura Village, and Sy.Nos. 61, 63, 39/6, 56, 58/2 & 59/2 of Doddanekundi village, K.R. Puram Hobli, Bangalore East Taluk with the following facilities and incentives.

**INFRASTRUCTRE FACILITIES:**

**LAND:**

Permission to establish "IT & ITES" in 28.5 acres land at Sy.Nos. 110, 111, 112 of Mahadevapura Village, and Sy.Nos. 61, 63, 39/6, 56, 58/2 & 59/2 of Doddanekundi village, K.R. Puram Hobli, Bangalore East Taluk. BDA to approve the layout plan.

**POWER :**

25,000 KVA from BESCOM

**WATER :**

10 lakh lpd from BWSSB. The promoter is advised to set up sewage treatment plant, adopt water recycling and water harvesting.

**Approval of SEZ Status**: To recommend to Govt. of India for grant of SEZ Status.

**INCENTIVES & CONCESSIONS :**

As per Millennium IT Policy and benefits available under SEZ Policy.

**Environment:**

The promoters were advised to obtain CFE from KSPCB and ECC from MOEF, GOI.

**Employment:**

Local employment to be provided as per Government policy.

**Others:**

The Promoter shall submit milestones / progress in implementation of the project regularly, which will be monitored by the Departments concerned.

The Department of Information Technology & Biotechnology shall further process the proposal for requisite clearances by coordinating with various Departments Concerned.

By Order and in the name of the Governor of Karnataka

**T.B.RENUKAPRASAD**

Under Secretary to Government

Information Technology, Biotechnology

and Science & Technology Department

**Sub:** Project proposal of M/s Tata Consultancy Services Ltd., to establish a **"IT/ITES-SEZ" at Hubli, Dharwad District**. - Approval for – Orders – Reg.

**Read:** Proceedings of the 7th State High Level Clearance Committee (SHLCC) meeting held on 28-08-2006.

**PREAMBLE:**

M/s. Tata Consultancy Services Ltd., company incorporated under Companies Act 1956, on 19.1.1995. It is a leading Information Technology consulting, services, business process outsourcing and engineering services organization. M/s TCS Ltd., is a 100% EOU, operating in 8 units in Bangalore, with a total investment of Rs. 152.00 Crores and has employed 10,000 IT professionals and reported consolidated revenues of $2.97 billion (U.S) in fiscal year 2005-06.

In the proposal submitted for the 7th State High Level Clearance Committee (SHLCC) meeting held on 28-08-2006, the Company had requested to approve the project to establish a **"SEZ for IT/ITES",** with an investment of Rs. 120 crores, in 50 acres of land, in Hubli-Dharwad District. The project proposes to provide employment to about 2,800 persons.

Government have examined the recommendations of the SHLCC Hence the following order:

**Government Order No: ITD 42 MDA 2006 (5), Bangalore, Dated:16th January 2007.**

In the circumstances explained in the Preamble, Government are pleased to accord approval to M/s. Tata Consultancy Services Ltd., to establish a **"IT/ITES-SEZ",** with an investment of Rs. 120 Crores, in 50 acres of land, in Hubli-Dharwad District with the following facilities and incentives.

**INFRASTRUCTRE FACILITIES:**

**LAND:**

Promoter to participate in the auction of land proposed by Hubli-Dharwad, Municipal corporation or KIADB to acquire and allot 50 acres of land, in Hubli-Dharwad District.

**POWER :**

4,000 KVA from HESCOM

**WATER :**

1,50,000 lpd to be supplied by HDMC/KIADB. The promoter is advised to set up sewage treatment plant, adopt water recycling and water harvesting.

